# ಇಂದೂ ಕ್ರೈಸ್ತವನಾ?

## [ ಇದು ಮತಾಂತರದ ಮೇಲೆ ಬ್ರಹ್ಮಾಸ್ತ್ರ ]




ರಚಿತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**


*www.thraithashakam.org*





# ಇಂದೂ – ಕ್ರೈಸ್ತವನಾ?

## (ಇದು ಮತಮಾರುವುದರ ಮೇಲೆ ಬ್ರಹ್ಮಾಸ್ತ್ರ)


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 100/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖಿರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಇಂದೂ – ಕ್ರೈಸ್ತವನಾ?



## (ಇದು ಮತಮಾರುವುದರ ಮೇಲೆ ಬ್ರಹ್ಮಾಸ್ತ್ರ)

ಈ ಗ್ರಂಥವೊಂದರ ಹೆಸರನ್ನನುಸರಿಸಿ ಇದೇನೋ ಮತದ್ವೇಷಕ್ಕೆ ಸಂಬಂಧಿಸಿರುವುದೇನೊ ಎಂದು ಕೆಲವರಂದುಕೊಳ್ಳುವುದಕ್ಕೆ ಅವಕಾಶವಿದೆ. ನಮ್ಮ ಗ್ರಂಥಗಳಲ್ಲಿ ಮತ ಸಾಮರಸ್ಯವೇ ಇರುತ್ತದೆ ಆದರೆ, ಮತ ದ್ವೇಷ ಇರುವುದಿಲ್ಲ. ನಾವು ಎಲ್ಲಾ ಮತಗಳನ್ನು, ಎಲ್ಲಾ ಮತ ಗ್ರಂಥಗಳನ್ನು ಸಮಾನ ದೃಷ್ಟಿಯಿಂದ ನೋಡುತ್ತೇವೆ. ಆದ್ದರಿಂದ ನಮ್ಮ ಹತ್ತಿರ ಮತ ದ್ವೇಷ ಎಂಬ ಮಾತೇ ಇರುವುದಿಲ್ಲ. ಯಾವ ಮತಸ್ಥನಾದರೂ ದೇವರಿಗು, ದೇವರ ಜ್ಞಾನಕ್ಕು ವಿರುದ್ಧವಾಗಿ ಪ್ರವರ್ತಿಸುತ್ತಿದ್ದರೂ, ಬೋಧಿಸುತ್ತಿದ್ದರೂ, ದೇವರ ಪಕ್ಷದಲ್ಲಿರುವ ನಾನು ಅದನ್ನು ಖಂಡಿಸುವುದು ನಡೆಯುತ್ತಿರುತ್ತದೆ. ಅವರು ಮಾಡುತ್ತಿರುವ ತಪ್ಪನ್ನು ಖಂಡಿಸುವುದೇ ಅಲ್ಲದೆ, ಅವರ ತಪ್ಪನ್ನು ಶಾಸ್ತ್ರಬದ್ಧವಾಗಿ ತಪ್ಪೆಂದು ವಿವರಿಸಿ ಹೇಳಿ, ಅಂತಹ ತಪ್ಪನ್ನು ಮಾಡದಂತಿರಲು ಅವರಿಗೆ ಪೂರ್ತಿಯಾಗಿ ಅರ್ಥವಾಗುವಂತೆ ಮಾಡುತ್ತೇವೆ. ದೇವರ ಕಡೆಯಿಂದ ನಾನು ಮಾಡಬೇಕಾದ ಕೆಲಸ ಅದೇ, ಆದ್ದರಿಂದ ಯಾರ ತಪ್ಪನ್ನಾದರೂ ಬಿಚ್ಚಿ ಹೇಳಬೇಕಾಗಿ ಬರುತ್ತಿದೆ.

ಪೂರ್ವದಲ್ಲಿ 'ಋಜುದರ್ಶಿನಿ' ಎಂಬ ಪುಸ್ತಕವನ್ನು ನೋಡಿ, ಅದರಲ್ಲಿ ಮತದ್ವೇಷ ಬಿಟ್ಟರೆ ಬೇರೆ ಜ್ಞಾನವಿಲ್ಲವೆಂದು ಗ್ರಹಿಸಿ, ಅದರಲ್ಲಿನ ಲೋಪಗಳನ್ನು ತೆಗೆದುಹಾಕುತ್ತಾ, ದೇವರ ಜ್ಞಾನಕ್ಕೆ ಬೆಲೆ ಇರುವಂತೆ, ಅದನ್ನು ಕೆಲವು ವಿಷಯಗಳಲ್ಲಿ ಖಂಡಿಸುತ್ತಾ, ಕೆಲವು ವಿಷಯಗಳಲ್ಲಿ ಸವರಿಸುತ್ತಾ ಪ್ರತ್ಯೇಕವಾಗಿ ಒಂದು ಗ್ರಂಥವನ್ನು ಬರೆಯಬೇಕಾಗಿ ಬಂದಿದೆ. ಹಾಗೆ ಬರೆದ ಗ್ರಂಥದ ಹೆಸರು **"ಮತಾತೀತ ದೇವರ ಮಾರ್ಗ"**. ಈಗಲೂ ಸಹ ಇಂದೂ ಕ್ರೈಸ್ತವನಾಗಿ ಬದಲಾಗಬಲ್ಲನಾ ಎಂಬ ಸಮಸ್ಯೆಯನ್ನು ವಿವರಿಸುತ್ತಾ, ಒಬ್ಬ ಇಂದೂ ಎಂದಿಗೂ ಕ್ರೈಸ್ತವನಾಗಿ ಬದಲಾಗುವುದಿಲ್ಲವೆಂದು, ಯಾರೂ ಬದಲಾಯಿಸುವುದಿಲ್ಲವೆಂದು ತಿಳಿಸುತ್ತಾ **"ಇಂದೂ–ಕ್ರೈಸ್ತವನಾ?"** ಎಂಬ ಈ ಗ್ರಂಥವನ್ನು ಬರೆಯಲಾಗಿದೆ. ಇದರಲ್ಲಿ ದೇವರ ಜ್ಞಾನಕ್ಕೆ ವಿರುದ್ಧವಾಗಿರುವ ವಿಷಯಗಳನ್ನು ಮಾತ್ರ ಖಂಡಿಸಿ, ಸರಿಯಾದ ಮಾರ್ಗವನ್ನು ತೋರಿಸುತ್ತಾ ಬರೆಯುವುದು ನಡೆದಿದೆಯೆಂದು

ಮೊದಲೇ ಹೇಳುತ್ತಿದ್ದೇವೆ. ದೇವರ ಮಾರ್ಗದಲ್ಲಿನ ಮುಳ್ಳನ್ನು, ಮೋಸವನ್ನು ತೆಗೆದುಹಾಕಿ, ದೇವರ ಜ್ಞಾನದಲ್ಲಿ ಮನುಷ್ಯರು ಸೇರಿಸಿಕೊಂಡ ಕಲುಷಿತವನ್ನು ತೆಗೆದುಹಾಕಿ, ಸ್ವಚ್ಛವಾದ ಮಾರ್ಗವನ್ನು, ಸ್ವಚ್ಛವಾದ ಜ್ಞಾನವನ್ನು ತಿಳಿಸುವುದೇ ಇದರಲ್ಲಿನ ಉದ್ದೇಶ. ದೈವ ಗ್ರಂಥಗಳನ್ನು ಆಧಾರ ಮಾಡಿಕೊಂಡು, ಅವುಗಳಲ್ಲಿ ದೇವರು ಸೂಚಿಸಿದ ಜ್ಞಾನವನ್ನೇ ತೋರಿಸುತ್ತಾ, ಅದರ ಪ್ರಕಾರ ಮನುಷ್ಯರು ಮಾಡುತ್ತಿರುವ ತಪ್ಪುಗಳನ್ನು ತಿಳಿಸುವುದು ಹೊರತು ಸ್ವತಃವಾಗಿ ನಾನು ಏನನ್ನು ಖಂಡಿಸಲಿಲ್ಲ.

ಭೂಮಿ ಮೇಲೆ ಪ್ರತಿ ಮನುಷ್ಯ ಯಾವುದೋ ಒಂದು ಮತದಲ್ಲಿರುವ ಕುಟುಂಬದಲ್ಲಿ ಹುಟ್ಟುವುದು ನಡೆಯುತ್ತಿದೆ. ನಾನು ಹಿಂದೂಗಳ ಕುಟುಂಬದಲ್ಲಿ ಹುಟ್ಟಿದ್ದೇನೆ. ಹುಟ್ಟಿದ ಕೆಲವು ವರ್ಷಗಳವರೆಗು ಮತವೆಂಬ ಮಾತೇ ನನಗೆ ತಿಳಿಯದು. ಸ್ವಲ್ಪ ಕಾಲ ಕಳೆದನಂತರ ನಾನು ಯಾವ ಮತದಲ್ಲಿ ಹುಟ್ಟಿದ್ದೇನೋ ತಿಳಿಯದಿದ್ದರೂ, ಮೊದಲು ಇತರ ಮತಗಳನ್ನು ಕುರಿತು ಸ್ವಲ್ಪ ತಿಳಿಯುವುದು ನಡೆದಿದೆ. ಅವನು ಮುಸ್ಲಿಮ್, ಇವನು ಕ್ರೈಸ್ತವನು ಎಂದು ಕೆಲವರನ್ನುತ್ತಿರುವಾಗ ಕೇಳಿದ್ದೇನೆ ಹೊರತು, ಮತ ಎನ್ನುವುದು ಮಾನವ ಜೀವನದಲ್ಲಿ ಎಷ್ಟೋ ಆಳವಾಗಿ ಬೇರೂರಿದೆಯೆಂದು ತಿಳಿಯದು. ನಂತರ ಸ್ವಲ್ಪ ಕಾಲಕ್ಕೆ ನಾನಿರುವುದು ಹಿಂದೂಮತವೆಂದು ತಿಳಿದುಹೋಗಿದೆ. ಕೆಲವು ದೇವತಾರಾಧನೆಗಳು ಮಾಡುವ ಸಂದರ್ಭದಲ್ಲಿ ನಾವು ಹಿಂದೂಗಳು ಎನ್ನುವ ವಿಷಯ ಸ್ವಲ್ಪ ಅರ್ಥವಾಗಿದೆ. ನಾನು ಹಿಂದೂಮತದಲ್ಲಿ ಹುಟ್ಟಿರುವುದರಿಂದ ಬಹಳ ಆಲಸ್ಯವಾಗಿ ನಾನಿರುವ ಮತವನ್ನು ಕುರಿತು ನನಗೆ ತಿಳಿದಿದೆ. ಅದೇ ಮುಸ್ಲಿಮ್ ಕುಟುಂಬದಲ್ಲಾಗಲಿ, ಕ್ರೈಸ್ತವ ಕುಟುಂಬದಲ್ಲಾಗಲಿ ಹುಟ್ಟಿದ್ದರೆ ಏಳು ಅಥವಾ ಎಂಟು ವರ್ಷಗಳಲ್ಲಿಯೇ ನಾನು ಇಂತಹ ಮತಸ್ಥನೆಂದು ತಿಳಿದುಹೋಗುತ್ತಿತ್ತು. ಏಕೆಂದರೆ! ಅವರು ಚಿಕ್ಕ ವಯಸ್ಸಿನ ಮಕ್ಕಳನ್ನು ಸಹ ಅವರ ಪ್ರಾರ್ಥನೆಗಳಲ್ಲಿ ಭಾಗವಹಿಸುವ ಹಾಗೆ ಮಾಡುವುದರಿಂದ ಚಿಕ್ಕ ವಯಸ್ಸಿನಲ್ಲಿಯೇ ಅವರ ಮತವನ್ನು ಕುರಿತು, ಅವರು ಆರಾಧಿಸುವ ದೇವರನ್ನು ಕುರಿತು ಅವರಿಗೆ ಸ್ವಲ್ಪ ತಿಳಿಯುತ್ತದೆ. ಹಾಗೆ

ಚಿಕ್ಕ ವಯಸ್ಸಿನಲ್ಲಿಯೇ ಪ್ರಾರಂಭವಾದ ಮತಾಭಿಲಾಷೆ ವಯಸ್ಸು ಬೆಳೆದಂತೆಲ್ಲಾ ಮತಾಭಿಮಾನವಾಗಿ ಸಹ ಬೆಳೆದುಹೋಗುತ್ತದೆ. ಯಾವಾಗಾದರೆ ಇದು ನನ್ನ ಮತವೆಂದು ಅದರಮೇಲೆ ಅಭಿಮಾನವನ್ನು ಮನುಷ್ಯ ಬೆಳೆಸಿಕೊಳ್ಳುತ್ತಾನೊ, ಆಗ ತನಗೆ ತಿಳಿಯದಂತೆಯೇ ಇತರರ ಮತಗಳ ಮೇಲೆ ಅಸೂಯೆ ಬೆಳೆದುಹೋಗುತ್ತದೆ. ಎಲ್ಲಿ ಮಾತನಾಡಿದರೂ ತನ್ನ ಮತವನ್ನು ಕುರಿತು ದೊಡ್ಡದಾಗಿ, ಇತರರ ಮತಗಳನ್ನು ಕುರಿತು ಕಡಿಮೆಯಾಗಿ ಮಾತನಾಡುವುದು ಪ್ರಾರಂಭ ಮಾಡುತ್ತಾನೆ. ವಯಸ್ಸು ಬೆಳೆದಂತೆಲ್ಲಾ ಸ್ವಮತಾಭಿಮಾನ ಒಂದುಕಡೆ, ಪರಮತ ದ್ವೇಷ ಮತ್ತೊಂದುಕಡೆ ಬೆಳೆದು, ಕೊನೆಗೆ ಮನುಷ್ಯ ಪೂರ್ತಿ ಒಬ್ಬ ಮತವಾದಿಯಾಗಿ ಬದಲಾಗುತ್ತಾನೆ. ಹುಟ್ಟುವಿಕೆಯಲ್ಲಿ ಮತ ಪ್ರಸಕ್ತಿಯೇ ಇಲ್ಲದ ಮನುಷ್ಯ ತಾನು ಹುಟ್ಟಿದ ಕುಟುಂಬವನ್ನನುಸರಿಸಿ, ಕುಟುಂಬದಲ್ಲಿರುವವರು ತನ್ನವರೇ ಎಂದು, ಹಾಗೆಯೇ ತನ್ನ ಕುಟುಂಬವೊಂದರ ಮತವೇ ನನ್ನ ಮತವೆಂದು ಅಂದುಕೊಳ್ಳುವುದು ನಡೆಯುತ್ತಿದೆ.

ಇದೆಲ್ಲವೂ ಗಮನಿಸಿದರೆ ಒಬ್ಬ ಮನುಷ್ಯ ಒಂದು ಮತವನ್ನು ಕುರಿತು ಹೇಳಿಕೊಳ್ಳುವುದು ಭೂಮಿ ಮೇಲೆ ಸಹಜ ಸಿದ್ಧವಾಗಿಹೋಗಿದೆ. ಒಬ್ಬ ಮನುಷ್ಯ ಒಂದು ಮತವನ್ನು ಸಮರ್ಥಿಸುತ್ತಾ ಮಾತನಾಡುವುದು ಸಹಜವಾದಾಗ, ಇತರ ಮತಗಳನ್ನು ಕುರಿತು ಅದರ ವಿರುದ್ಧವಾಗಿ ಮಾತನಾಡುವುದು ಸಹ ಸಹಜಸಿದ್ಧವಾಗಿರುತ್ತದೆ. ತನ್ನದು ಅಂದುಕೊಂಡು ಒಂದು ಮತವನ್ನು ಸಮರ್ಥಿಸುವ ಮನುಷ್ಯ, ಇತರರದೆಂದು ಉಳಿದ ಮತಗಳನ್ನು ವಿಮರ್ಶಿಸುತ್ತಿರುತ್ತಾನೆ. ಇದನ್ನನುಸರಿಸಿ ಒಬ್ಬ ಮನುಷ್ಯನಲ್ಲಿ ಎಲ್ಲಾ ಮತಗಳನ್ನು ಸಮಾನವಾಗಿ ಗೌರವಿಸುವ ಮತಸಾಮರಸ್ಯ ಇರುವುದಿಲ್ಲವೆಂದು ತಿಳಿಯುತ್ತದೆ. ಸಾಧಾರಣ ಮನುಷ್ಯನಾದವನು ಉಳಿದ ಮತವನ್ನು ಕುರಿತು ವಿಮರ್ಶಿಸಲಾರನು, ತನ್ನ ಮತವನ್ನು ಗೌರವಿಸಿದ ಹಾಗೆಯೇ ಪಕ್ಕದಲ್ಲಿರುವ ಮತ್ತೊಂದು ಮತವನ್ನು ಸಹ ಗೌರವಿಸುತ್ತಿದ್ದಾನೆ ಎಂದರೆ, ಅದು ಸ್ವಲ್ಪ ದೊಡ್ಡದಾಗಿಯೇ ಹೊರಗಿನ ಪ್ರಜೆಗಳಿಗೆ ಕಾಣಿಸುತ್ತದೆ. ಆದರೂ ಅದರಲ್ಲಿ ನಾವು ಗಮನಿಸಬೇಕಾಗಿರುವುದು

ಏನೆಂದರೆ! ಭೂಮಿಮೇಲೆ ಮುಖ್ಯವಾಗಿರುವ ಮೂರು ಮತಗಳಲ್ಲಿ, ಒಂದು ಮತದಲ್ಲಿನ ವ್ಯಕ್ತಿ ಉಳಿದ ಎರಡು ಮತಗಳಲ್ಲಿ ಒಂದು ಮತವನ್ನು ಕುರಿತು ಮಾತ್ರ ಸ್ವಲ್ಪ ಗೌರವವಾಗಿ ಮಾತನಾಡುತ್ತಿರುತ್ತಾನೆ. ಆದರೆ ಉಳಿದ ಮತ್ತೊಂದು ಮತದ ಮೇಲೆ ಪೂರ್ತಿ ಅಸೂಯೆ ಹೊಂದಿರುತ್ತಾನೆ. ತನ್ನ ಮತದ ಮೇಲೆ ಎಷ್ಟು ಪ್ರೇಮವಿದೆಯೊ ಎರಡನೆಯ ಮತದ ಮೇಲೆ ಅಷ್ಟು ಪ್ರೇಮ ಇಲ್ಲದಿದ್ದರೂ, ಕೆಲವು ವಿಷಯಗಳಲ್ಲಿ ಎರಡನೆಯ ಮತದಲ್ಲಿನ ಕೆಲವು ಗ್ರಂಥಗಳನ್ನು ಸಮರ್ಥಿಸಿ ಮಾತನಾಡುವುದರಿಂದ, ಆತನು ಎರಡನೆಯ ಮತವನ್ನು ಸಮರ್ಥಿಸಿದ ಹಾಗೆ ಕಾಣಿಸಿದರೂ, ಅದು ತನ್ನ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವುದಕ್ಕೆ ಎಂದು ಯಾರಿಗೂ ತಿಳಿಯದು. ಅಂತಹವನು ಮೂರನೆಯ ಮತದ ಮೇಲೆ ಪೂರ್ತಿ ದ್ವೇಷ ಹೊಂದಿರುತ್ತಾನೆ. ಮೂರು ಮತಗಳನ್ನು ಸಮಾನವಾಗಿ ಗೌರವಿಸುವವನು ಬಹುಶಃ ಯಾರೂ ಇರುವುದಿಲ್ಲ. ತನ್ನ ಮತದ ಮೇಲೆ ಪ್ರೇಮ ಹೊಂದಿರುವವನು ಎರಡನೆಯ ಮತವನ್ನು ಸ್ವಲ್ಪ ಸಮರ್ಥಿಸಿದರೂ, ಅದು ತನ್ನ ಮತವನ್ನು ಬೆಳೆಸಿಕೊಳ್ಳುವುದಕ್ಕೆ ಎಂದು ಹೇಳಿದ್ದೇವೆ. ಸ್ವಲ್ಪವಾದರೂ ಭೇದಭಾವ ಇಲ್ಲದಂತೆ ಮೂರು ಮತಗಳನ್ನು ಆದರಿಸುವವನು, ಒಂದೇ ಗೌರವದಿಂದ ಮಾತ ನಾಡುವವನು ಯಾರಾದರೂ ಭೂಮಿಮೇಲೆ ಇದ್ದರೆ, ಅವನು ಸಾಧಾರಣ ಮನುಷ್ಯನಾಗಿರುವುದಿಲ್ಲ.

ಒಬ್ಬ ಮತಸ್ಥನು ಎರಡನೆಯ ಮತವನ್ನು ಸ್ವಲ್ಪ ಸಮರ್ಥಿಸುವುದು ಅಲ್ಲಲ್ಲಿ ಕಾಣಿಸುತ್ತಿದೆ. ಅಂತಹವನು ಎರಡನೆಯ ಮತವನ್ನು ಪೂರ್ತಿಯಾಗಿ ಸಮರ್ಥಿಸದೆ, ತನ್ನ ಮತ ಅಭಿವೃದ್ಧಿಯಾಗುವುದಕ್ಕೆ ಬೇಕಾದ ವಿಷಯಗಳನ್ನು ಮಾತ್ರ ಸಮರ್ಥಿಸುತ್ತಿರುತ್ತಾನೆ. ಉದಾಹರಣೆಗೆ ಕೆಲವರು ಕ್ರೈಸ್ತವ ಬೋಧಕರು ಹಿಂದೂಮತದಲ್ಲಿನ ವೇದಗಳನ್ನು ಸಮರ್ಥಿಸುತ್ತಾ, ಅದರಲ್ಲಿನ ಕೆಲವು ವಾಕ್ಯಗಳನ್ನು ದೊಡ್ಡ ವಾಕ್ಯಗಳಾಗಿ ಹೇಳುತ್ತಿರುತ್ತಾರೆ. ಅಂಥವರು ಹಿಂದೂ ಮತವನ್ನು ಪೂರ್ತಿಯಾಗಿ ಸಮರ್ಥಿಸದೆ, ಹಿಂದೂಮತದಲ್ಲಿನ ವೇದಗಳನ್ನು ಮಾತ್ರ ಸಮರ್ಥಿಸಿ ಹೇಳುತ್ತಿರುತ್ತಾರೆ. ಅದು ವೇದಗಳಲ್ಲಿ ತಮ್ಮ ಮತಕ್ಕೆ

ಉಪಯೋಗಪಡುವ ಕೆಲವು ಶ್ಲೋಕಗಳನ್ನು ಮಾತ್ರ ತೆಗೆದುಕೊಂಡು ಅವುಗಳಿಗೆ ಅರ್ಥ ಹೇಳುತ್ತಿರುತ್ತಾರೆ. ಹಾಗೆ ಹೇಳುವ ವಿಷಯವೆಲ್ಲವೂ ತಮ್ಮ ಮತವನ್ನು ಉದ್ದೇಶಿಸಿ ವೇದಗಳಲಿಯೂ ಸಹ ಇದೆಯೆಂದು, ವೇದಗಳು ಸಹ ತಮ್ಮ ಮತವನ್ನು ಸಮರ್ಥಿಸುತ್ತಿವೆಂದು ಹೇಳುತ್ತಿರುತ್ತಾರೆ. ಈ ವಿಧವಾಗಿ ತಮ್ಮ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವುದರ ಉದ್ದೇಶಕ್ಕಾಗಿ ಕೆಲವರು ಕ್ರೈಸ್ತವ ಬೋಧಕರು ಹಿಂದೂಮತದಲ್ಲಿನ ವೇದಗಳನ್ನು ಸಮರ್ಥಿಸುತ್ತಿದ್ದಾರೆ. ಅಷ್ಟುಮಾತ್ರಕ್ಕೆ ಅವರು ಹಿಂದೂಮತವೆಲ್ಲವನ್ನು ಸಮರ್ಥಿಸಿದ್ದಾರೆಂದುಕೊಳ್ಳುವುದು ತಪ್ಪು. ಹಿಂದೂಮತದಲ್ಲಿನ ಗ್ರಂಥಗಳಲ್ಲಿರುವ ಕೆಲವು ಶ್ಲೋಕಗಳನ್ನು ಇಲ್ಲವೆ ಕೆಲವು ವಾಕ್ಯಗಳನ್ನು ತಮ್ಮ ಮತವನ್ನು ಸಮರ್ಥಿಸುತ್ತಿವೆಂದು ಹೇಳುತ್ತಾ, ಕೊನೆಗೆ ತಮ್ಮ ಮತವನ್ನು ಕುರಿತು ಪ್ರಚಾರ ಮಾಡಿಕೊಳ್ಳುತ್ತಿರುತ್ತಾರೆ. ವೇದಗಳಲ್ಲಿ ಏಸುವನ್ನು ಕುರಿತು ಹೇಳಿದ್ದಾರೆಂದು, ವೇದಗಳಲ್ಲಿ ರಕ್ತಪ್ರೋಕ್ಷಣೆಯಿಂದ ಪಾಪ ಪರಿಹಾರ ಇದೆಯೆಂದು ಹೇಳಿದ್ದಾರೆಂದು, ಇನ್ನೂ ಎಷ್ಟೋ ವಿಷಯಗಳು ಕ್ರೈಸ್ತವ ಮತವನ್ನು ಕುರಿತು ವೇದಗಳಲ್ಲಿ ಹೇಳಿದ್ದಾರೆಂದು ಪ್ರಚಾರ ಮಾಡುತ್ತಿರುತ್ತಾರೆ.

ಅದೇ ವಿಧವಾಗಿ ಮುಸ್ಲಿಮ್‌ರಲ್ಲಿ ಕೆಲವರು ಬೋಧಕರಾಗಿರುವವರು ಕೆಲವು ಸಂಘಗಳನ್ನು ಏರ್ಪಡಿಸಿಕೊಂಡು, ತಾವು ಇತರ ಮತಗಳನ್ನು ಸಹ ಸಮಾನವಾಗಿ ಗೌರವಿಸುತ್ತೇವೆಂದು ಹೇಳಿಕೊಳ್ಳುತ್ತಿರುತ್ತಾರೆ. ಅಂಥವರು ಹಿಂದೂಮತದಲ್ಲಿನ ವೇದಗಳನ್ನು, ಉಪನಿಷತ್ತುಗಳನ್ನು, ಪುರಾಣಗಳನ್ನು, ಕೊನೆಗೆ ಭಗವದ್ಗೀತೆಯನ್ನು ಸಹ ಬಳಸಿಕೊಳ್ಳುತ್ತಾ, ಅದರಲ್ಲಿ ಅವರಿಗೆ ಅಗತ್ಯವಾದ ಶ್ಲೋಕಗಳನ್ನು, ವಾಕ್ಯಗಳನ್ನು, ಪದ್ಯಗಳನ್ನು ಹೇಳುತ್ತಾ ಅವೆಲ್ಲವೂ ತಮ್ಮ ಮತವನ್ನು ಬಲಪಡಿಸುತ್ತಿವೆಯೆಂದು ಹೇಳಿ ಪ್ರಚಾರ ಮಾಡಿಕೊಳ್ಳುತ್ತಿರುತ್ತಾರೆ. ಇದೆಲ್ಲವೂ ಒಂದು ಪದ್ಧತಿಯ ಪ್ರಕಾರ ತಮ್ಮ ಮತವನ್ನು ಪ್ರಚಾರ ಮಾಡಿಕೊಳ್ಳುವುದರ ಉದ್ದೇಶಕ್ಕಾಗಿ ಹೇಳುವುದು ಹೊರತು, ಹಿಂದೂಮತವನ್ನು ಪೂರ್ತಿಯಾಗಿ ಸಮರ್ಥಿಸುವುದಕ್ಕೆ ಅಲ್ಲ. ಉದಾಹರಣೆಗೆ ದೇವರು ಮನುಷ್ಯನಂತೆ ಹುಟ್ಟುವುದಿಲ್ಲ

ಎನ್ನುವ ಖುರ್‌ಆನ್‌ನಲ್ಲಿನ ವಿಷಯವನ್ನು ಸಮರ್ಥಿಸುವುದಕ್ಕೆ, ಅದಕ್ಕೆ ಸರಿಹೋಗುವ ಶ್ಲೋಕವನ್ನು ಭಗವದ್ಗೀತೆಯಿಂದ ಹೇಳಿ, ಖುರ್‌ಆನ್‌ನಲ್ಲಿ ಹೇಳಿದ ವಿಷಯವನ್ನೇ ಭಗವದ್ಗೀತೆಯಲ್ಲಿ ಸಹ ಹೇಳಿದ್ದಾರೆಂದು ಹೇಳುತ್ತಿರುತ್ತಾರೆ. ಇಲ್ಲಿ ಹಿಂದೂಮತದಲ್ಲಿನ ಭಗವದ್ಗೀತೆಯನ್ನು, ಅದರಲ್ಲಿನ ಶ್ಲೋಕವನ್ನು ಹೇಳಿದರೂ, ಅದು ತಮ್ಮ ಮತವನ್ನು ಪ್ರಚಾರ ಮಾಡುವುದರ ಉದ್ದೇಶಕ್ಕಾಗಿಯೇ ಇದೆಯೆಂದು ತಿಳಿಯುತ್ತದೆ. ಭಗವದ್ಗೀತೆಯಲ್ಲಿ ಅವರಿಗೆ ಅಗತ್ಯವಾದ ಶ್ಲೋಕಗಳನ್ನು ಮಾತ್ರ ತೆಗೆದುಕೊಂಡು ಹೇಳುತ್ತಿರುತ್ತಾರಾಗಲಿ, ಭಗವದ್ಗೀತೆಯಲ್ಲಿ ದೇವರು ಮನುಷ್ಯನಾಗಿ ಹುಟ್ಟುತ್ತಾನೆ ಎಂದು ಇರುವ ಶ್ಲೋಕವನ್ನು ಮಾತ್ರ ಹೇಳುವುದಿಲ್ಲ.

ವೇದಗಳು, ವೇದಗಳಲ್ಲಿನ ಉಪನಿಷತ್ತುಗಳು, ಭಗವದ್ಗೀತೆ ಮತ್ತು ಪುರಾಣಗಳನ್ನು ಎಲ್ಲವನ್ನು ಉಪಯೋಗಿಸಿಕೊಳ್ಳುತ್ತಾ, ಎಲ್ಲಿ ಏನು ಅವಶ್ಯಕತೆಯೊ ಅದನ್ನು ಹೇಳುತ್ತಾ ಕ್ರೈಸ್ತರು ತಮ್ಮ ಮತವನ್ನು ಪ್ರಚಾರ ಮಾಡಿಕೊಂಡರೆ, ಹಾಗೆಯೇ ಮುಸ್ಲಿಮ್‌ರು ಸಹಾ ಪ್ರತ್ಯೇಕವಾಗಿ ಸಂಘಗಳನ್ನು ಏರ್ಪಡಿಸಿಕೊಂಡು, ಆ ಸಂಘಗಳ ಅಧ್ಯಕ್ಷರು ಒಬ್ಬರಿಗಿಂತ ಮತ್ತೊಬ್ಬರು ಪೋಟಿಯಾಗಿ ಹಿಂದುಗಳ ಗ್ರಂಥಗಳನ್ನು ಬಳಸಿಕೊಳ್ಳುತ್ತಾ, ಅದರಲ್ಲಿ ಅವರಿಗೆ ಅನುಕೂಲವಾದ ಶ್ಲೋಕಗಳನ್ನು, ವಾಕ್ಯಗಳನ್ನು ಬಳಸಿಕೊಳ್ಳುತ್ತಾ, ಅವರ ಮತವನ್ನು ದೊಡ್ಡದಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಇದೆಲ್ಲವೂ ಗಮನಿಸಿದರೆ ಹಿಂದೂಮತದಲ್ಲಿನ ಗ್ರಂಥಗಳೆಲ್ಲವೂ ಇತ್ತ ಬೈಬಲ್‌ನು, ಅತ್ತ ಖುರ್‌ಆನ್ ಗ್ರಂಥವನ್ನು ಸಮರ್ಥಿಸುತ್ತಿರುವ ಹಾಗೆ ಕಾಣಿಸುತ್ತಿದೆ. ಹಿಂದೂಮತವನ್ನು ತೋರಿಸುತ್ತಾ ಉಳಿದ ಎರಡು ಮತಗಳು ತಮ್ಮ ತಮ್ಮ ಮತಗಳನ್ನು ಪ್ರಚಾರ ಮಾಡಿಕೊಳ್ಳುವುದು ಹೊರತು, ಅವರು ಹಿಂದೂ ಮತವನ್ನು ಸಾಮರಸ್ಯವಾಗಿ ನೋಡಿದಂತೆ ಯಾವುದೂ ಕಾಣಿಸುತ್ತಿಲ್ಲ. ಒಟ್ಟಾರೆ ಮತಹುಚ್ಚು ಹೊರತು ದೈವಭಾವವಾಗಲಿ, ಜ್ಞಾನಪ್ರಸ್ತಾವನೆಯಾಗಲಿ ಇವರ ಕೆಲಸಗಳಲ್ಲಿ ಕಾಣಿಸುತ್ತಿಲ್ಲ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ! ಎಲ್ಲವನ್ನು ಸೃಷ್ಟಿಸಿದ ದೇವರು

ಮತಗಳನ್ನು ಏಕೆ ಸೃಷ್ಟಿಸಬೇಕು? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ.

ದೇವರು ಜ್ಞಾನವನ್ನು ಸೃಷ್ಟಿಸಿದ್ದಾನೆ ಹೊರತು, ಮತಗಳನ್ನು ಸೃಷ್ಟಿಸಲಿಲ್ಲ. ಮತ ಎನ್ನುವುದು ಪ್ರಾಥಮಿಕ ಅಜ್ಞಾನವೆಂದು ನಾವು ಬಹಳಸಾರಿ ಹೇಳಿದ್ದೇವೆ. ದೇವರು ತನ್ನ ಜ್ಞಾನವನ್ನು ಎರಡು ದೇಶಗಳಲ್ಲಿ ನಾಲ್ಕುಬಾರಿ ತಿಳಿಸಿದ್ದಾನೆ. ದೇವರು ತನ್ನ ಧರ್ಮವನ್ನು ಅನುಸರಿಸಿ ಯಾರೊಂದಿಗೂ ನೇರವಾಗಿ ಮಾತನಾಡುವುದಿಲ್ಲ. ಆದರೆ ಆತನು (ದೇವರು) ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡದಿದ್ದರೂ, ಪರೋಕ್ಷವಾಗಿ ಮಾತನಾಡಬಹುದೆಂಬ ಸೂತ್ರವನ್ನನುಸರಿಸಿ, ತನ್ನ ಜ್ಞಾನವನ್ನು ಗ್ರಹಗಳಾದ ಇಬ್ಬರಿಂದ ಎರಡುಬಾರಿ, ಮನುಷ್ಯರಂತಿರುವ ತನ್ನ ದೂತರಿಂದ ಎರಡುಬಾರಿ, ಎರಡು ದೇಶಗಳಲ್ಲಿ ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ಹಾಗೆ ಹೇಳಿಸಿದ ಜ್ಞಾನದಲ್ಲಿ ಒಂದು ಗ್ರಹ, ಒಬ್ಬ ದೂತ (ಮನುಷ್ಯನಂತಿರುವ ಭಗವಂತನು) ಹೇಳಿದ ಜ್ಞಾನ ಭಗವದ್ಗೀತೆ ಎಂಬ ಪ್ರಥಮ ದೈವ ಗ್ರಂಥವಾಗಿ ಹೊರಬಂದಿದೆ. ಹಾಗೆಯೇ ಮತ್ತೊಂದು ಗ್ರಹ ಹೇಳಿದ ಜ್ಞಾನ ಖುರ್‌ಆನ್ ಗ್ರಂಥವಾಗಿಯೂ, ಬಂದಿರುವ ದೂತ ಹೇಳಿದ ಜ್ಞಾನ ಬೈಬಲ್ ಗ್ರಂಥವಾಗಿಯೂ ತಯಾರಾಗುವುದು ನಡೆದಿದೆ. ಒಟ್ಟಾರೆ ದೇವರು ತಿಳಿಸಿದ ದೇವರ ಜ್ಞಾನ ಮೂರು ಗ್ರಂಥಗಳಾಗಿದೆ, ಆ ಮೂರು ಗ್ರಂಥ ಗಳಲ್ಲಿರುವುದು ದೇವರ ಜ್ಞಾನವೇ, ಆದ್ದರಿಂದ ಆ ಮೂರು ಗ್ರಂಥಗಳನ್ನು ಮೂರು ದೈವ ಗ್ರಂಥಗಳೆಂದು ಹೇಳುವುದು ನಡೆದಿದೆ.

ದೇವರು ತನ್ನ ವಿಧಾನಗಳನ್ನು (ಧರ್ಮಗಳನ್ನು) ಮನುಷ್ಯರಿಗೆ ತಿಳಿಸುವುದಕ್ಕೆ ಮೂರು ದೈವ ಗ್ರಂಥಗಳನ್ನು, ಮೂರು ಕಾಲಗಳಲ್ಲಿ ಕೊಟ್ಟರೆ, ಮನುಷ್ಯ ಆ ಮೂರು ಗ್ರಂಥಗಳನ್ನು ತೆಗೆದುಕೊಂಡು, ದೇವರು ಹೇಳಿದ ಜ್ಞಾನದ ಪ್ರಕಾರ ಅಲ್ಲದೆ, ತನ್ನ ಸ್ವಂತ ಜ್ಞಾನದಿಂದ ಮೂರು ಗ್ರಂಥಗಳನ್ನು ಮೂರು ಮತಗಳನ್ನು ಹುತ್ತಗಳ ಹಾಗೆ ತಯಾರುಮಾಡಿಕೊಂಡು ತಾವು ಆ ಹುತ್ತದಲ್ಲಿ ನಿವಾಸಿಸುವ ಗೆದ್ದಲಂತೆ ಮಾರ್ಪಟ್ಟಿದ್ದಾನೆ. ಪ್ರಪಂಚದಲ್ಲಿ ಏನನ್ನು

ಮಾಡುವುದಕ್ಕಾಗಲಿ ಯಾವುದೇ ಸ್ವತಂತ್ರವಿಲ್ಲದ ಮನುಷ್ಯನಿಗೆ, ದೇವರು ಒಂದೇ ಒಂದು ಸ್ವತಂತ್ರವನ್ನು ಕೊಟ್ಟಿದ್ದಾನೆ. ಒಂದೇ ಒಂದು ದೇವರ ವಿಷಯದಲ್ಲಿ ಮಾತ್ರ ಮನುಷ್ಯನಿಗೆ ಸ್ವತಂತ್ರವಿದೆ. ಪ್ರಪಂಚ ವಿಷಯಗಳಲ್ಲಿ ಮನುಷ್ಯನಿಗೆ ಸ್ವಲ್ಪವೂ ಸ್ವತಂತ್ರತೆ ಇಲ್ಲ. ಮನುಷ್ಯನನ್ನು ಕರ್ಮ ತನ್ನ ವಶದಲ್ಲಿ ಇಟ್ಟುಕೊಂಡು ಕರ್ಮಪ್ರಕಾರವೇ ನಡೆಸುತ್ತದೆ. ದೇವರ ವಿಷಯಗಳಲ್ಲಿ ಕರ್ಮ ಕೆಲಸ ಮಾಡುವುದಿಲ್ಲ. ಕರ್ಮಾತೀತವಾದುದು ದೈವ. ಆದ್ದರಿಂದ ದೇವರ ವಿಷಯದಲ್ಲಿ ಮನುಷ್ಯನನ್ನು ತನ್ನ ಇಷ್ಟದ ಪ್ರಕಾರ ನಡೆದುಕೊಳ್ಳುವಹಾಗೆ ದೇವರೇ ಮನುಷ್ಯನಿಗೆ ಸ್ವಾತಂತ್ರ್ಯವನ್ನು ಕೊಟ್ಟಿದ್ದಾನೆ. ದೇವರ ವಿಷಯದಲ್ಲಿ ಸ್ವಾತಂತ್ರ್ಯತೆ ಹೊಂದಿದ ಮನುಷ್ಯ ದೇವರು ಕೊಟ್ಟ ಮೂರು ದೈವ ಗ್ರಂಥಗಳನ್ನು ತೆಗೆದುಕೊಂಡು ತನ್ನ ಇಷ್ಟ ಬಂದಹಾಗೆ ಮೂರು ಮತಗಳನ್ನು ಸೃಷ್ಟಿಸಿ, ಅವುಗಳಿಗೆ ಆಧಾರ ಮೂರು ಗ್ರಂಥಗಳೆಂದು ಭಗವದ್ಗೀತೆಯನ್ನು, ಬೈಬಲ್‌ನ್ನು, ಖುರ್‌ಆನ್‌ನನ್ನು ತೋರಿಸುವುದು ನಡೆದಿದೆ. ಹಾಗೆ ತೋರಿಸುವುದಲ್ಲದೆ ಮೂರು ದೈವ ಗ್ರಂಥಗಳನ್ನು ಮೂರು ಮತ ಗ್ರಂಥಗಳಾಗಿ ವರ್ಣಿಸಿ ಹೇಳುವುದು ನಡೆದಿದೆ. ಆದ್ದರಿಂದ ಮೂರು ಮತಗಳಲ್ಲಿ ಒಂದೊಂದು ಮತದವರು ಒಂದೊಂದು ಗ್ರಂಥವನ್ನು ತಮ್ಮ ಮತ ಗ್ರಂಥವಾಗಿ ಹೇಳಿಕೊಳ್ಳುತ್ತಿದ್ದಾರೆ. ತಾವು ಖುರ್‌ಆನ್ ಗ್ರಂಥದ ಪ್ರಕಾರ ಅನುಸರಿಸುವುದರಿಂದ ತಮ್ಮದು ಪ್ರತ್ಯೇಕ ಮತವಾಗಿ ಇದೆಯೆಂದು ಮುಸ್ಲಿಮ್‌ರು ಎನ್ನುತ್ತಿದ್ದಾರೆ. ಹಾಗೆಯೇ ತಾವು ಬೈಬಲ್ ಗ್ರಂಥವನ್ನು ಅನುಸರಿಸುವುದರಿಂದ ಕ್ರೈಸ್ತವರಾಗಿದ್ದೇವೆಂದು ಕೆಲವರನ್ನುತ್ತಿದ್ದಾರೆ. ಅದೇ ವಿಧವಾಗಿ ತಾವು ಮುಸ್ಲಿಮ್, ಕ್ರೈಸ್ತರಿಗೆ ಬೇರೆಯಾಗಿರುವ ಹಿಂದೂಮತವಾಗಿ ಇದ್ದೇವೆಂದು ಕೆಲವರೆನ್ನುತ್ತಿದ್ದಾರೆ. ಆದರೆ ಹಿಂದೂಗಳಲ್ಲಿ ಕೆಲವರು ತಮ್ಮ ಗ್ರಂಥ ಭಗವದ್ಗೀತೆಯೆಂದು, ತಮ್ಮ ಗ್ರಂಥಗಳು ವೇದಗಳೆಂದು ಇನ್ನೂ ಕೆಲವರನ್ನುತ್ತಿದ್ದಾರೆ. ಕ್ರೈಸ್ತವ ಮತದವರಿಗೆ ಬೈಬಲ್, ಮುಸ್ಲಿಮ್ ಮತದವರಿಗೆ ಖುರ್‌ಆನ್ ಗ್ರಂಥ ಆಧಾರವೆಂದು ಅವರು ಹೇಳುತ್ತಿರುವಾಗ, ಹಿಂದೂಗಳು ಮಾತ್ರ ತಮ್ಮ ಗ್ರಂಥ ಯಾವುದೋ ಎಂದು ಸರಿಯಾಗಿ ತಿಳಿಯದ ಸ್ಥಿತಿಯಲ್ಲಿ ಇದ್ದೂ ಕೆಲವರು ಭಗವದ್ಗೀತೆ ಎಂದರೆ, ಕೆಲವರು ವೇದಗಳೆಂದು ಎನ್ನುತ್ತಿದ್ದಾರೆ.

ಅಷ್ಟೇ ಅಲ್ಲದೆ ಮುಸ್ಲಿಮ್‌ರು ತಮ್ಮ ದೇವರು "ಅಲ್ಲಾಹ್" ಎಂದು, ಕ್ರೈಸ್ತರು ತಮ್ಮ ದೇವರು "ಯೆಹೋವಾ" ಎಂದು ಅನ್ನುತ್ತಿದ್ದರೆ, ಹಿಂದೂಗಳು ಮಾತ್ರ ತಮ್ಮ ದೇವರು ಯಾರೋ ಹೇಳಲಾರದ ಸ್ಥಿತಿಯಲ್ಲಿದ್ದು ಒಬ್ಬೊಬ್ಬರು ಒಂದೊಂದು ದೇವರನ್ನು ತಿಳಿಸುತ್ತಾ, ರಾಮನೆಂದು, ರಂಗನೆಂದು, ವಿಷ್ಣುವೆಂದು, ಈಶ್ವರನೆಂದು ಅನೇಕರನ್ನು ಹೇಳುತ್ತಿದ್ದಾರೆ.

ಆಧ್ಯಾತ್ಮಿಕ ವಿಷಯಗಳಲ್ಲಿ ಜೀವಿಗೆ ಸ್ವಾತಂತ್ರ್ಯವನ್ನು ಕೊಟ್ಟು, ದೈವ ಮಾರ್ಗದಲ್ಲಿ ಕರ್ಮಬಂಧ ಇಲ್ಲದಹಾಗೆ ದೇವರು ಮಾಡಿ, ಮನುಷ್ಯನಿಗೆ ಸ್ವೇಚ್ಛೆ ಕೊಡುವುದರಿಂದ ಮನುಷ್ಯ ತನ್ನ ಭಕ್ತಿ ಮಾರ್ಗದಲ್ಲಿಯೇ ಮತವನ್ನು ಸೃಷ್ಟಿಸಿಕೊಂಡಿದ್ದಾನೆ. ಮತ ಎನ್ನುವುದು ದೈವಮಾರ್ಗದಲ್ಲಿ ಮುಖ್ಯವಾದ ವಿಶ್ವಾಸಮಾರ್ಗವೆಂದು ಅಂದುಕೊಂಡು, ಈ ಮತದ ಹೊರತು ಯಾವ ಮತದಲ್ಲಿಯು ದೇವರು ತಿಳಿಯುವುದಿಲ್ಲ ಎಂದು ಹೇಳಿಕೊಳ್ಳುತ್ತಾ, ತಮ್ಮ ಮತವೇ ನಿಜವಾದ ದೈವಮಾರ್ಗವೆಂಬ ನಂಬಿಕೆಯಿಂದ ಪ್ರತಿಯೊಬ್ಬ ಮನುಷ್ಯ ಇದ್ದಾನೆ. ಮತ ಎನ್ನುವುದು ದೈವಮಾರ್ಗದಲ್ಲಿ ಪ್ರಾಥಮಿಕ ಅಜ್ಞಾನವೆಂದು ತಿಳಿಯಲಾರದೆ ಹೋಗಿದ್ದಾರೆ. ಕ್ರೈಸ್ತವರಲ್ಲಿ, ಮುಸ್ಲಿಮ್‌ರಲ್ಲಿ ಮತದವರೆಗೇ ಅಜ್ಞಾನ ನಿಲ್ಲದೆ, ಇನ್ನೂ ಸ್ವಲ್ಪ ಮುಂದಕ್ಕೆ ಹರಡಿ ಮತದೊಳಗೆ ಕೆಲವು ವರ್ಗಗಳು ಏರ್ಪಟ್ಟು, ನಮ್ಮ ವರ್ಗವೇ ದೇವರಿಗೆ ಹತ್ತಿರವಾಗಿದೆಯೆಂದು ಯಾರಿಗವರು ಅಂದುಕೊಳ್ಳುವುದು ನಡೆದಿದೆ. ಆ ಎರಡು ಮತಗಳಲ್ಲಿ ಕ್ರೈಸ್ತವರು ಕೆಲವು ವರ್ಗಗಳಾಗಿ ಇರುವಾಗ, ಮುಸ್ಲಿಮ್‌ರು ನೇರವಾಗಿ 74 ವರ್ಗಗಳಾಗಿ ಇರುವಂತೆ ಕೇಳಿದ್ದೇವೆ. ಅದರಲ್ಲಿ "ಜಮಾಯತೇ ಇಸ್ಲಾಮ್" ಗುಂಪು ಪ್ರತ್ಯೇಕವಾಗಿ ಉಳಿದಿದ್ದು ಸುನ್ನೀ ಜಮಾವತ್ ಗುಂಪು ಎಂದೂ, ಸುನ್ನೀ ಜಮಾವತ್ ಗುಂಪಿನಲ್ಲಿಯೇ 73 ಭಾಗಗಳಿವೆಯೆಂದೂ, ಕೆಲವರು ಮುಸ್ಲಿಮ್ ಹಿರಿಯರು ಹೇಳಿದಾಗ ಕೇಳಿದ್ದೇವೆ. ಇನ್ನು ಹಿಂದೂಮತವನ್ನು ನೋಡಿದರೆ ಕುಲಗಳೆಂಬ ಹೆಸರಿನಿಂದ ನೂರಾರು ಸಂಖ್ಯೆಯಿಂದ ಹಿಂದೂಮತ ಕಲಬೆರಕೆ ಸೊಪ್ಪಿನ ಬುಟ್ಟಿಯಂತಿದೆ. ಮುಸ್ಲಿಮ್ ಮತದಲ್ಲಿ ಸುನ್ನೀ ಜಮಾವತ್ ಗುಂಪಿಗಿಂತ

ಜಮಾಯತೇ ಇಸ್ಲಾಮ್ ಗುಂಪಿನವರು ನಾವೇ ನಿಜವಾದ ಭಕ್ತರು, ನಮ್ಮ ಮಾರ್ಗವೇ ದೇವರಿಗೆ ಹತ್ತಿರವಾಗಿರುವ ಮಾರ್ಗವೆಂದು ಏಕ್‌ಮೀನಾರ್ ಮಸ್ಜೀದ್‌ಗಳನ್ನು ಏರ್ಪಡಿಸಿಕೊಂಡು ಹೇಳುತ್ತಿರುವಾಗ, ಸುನ್ನೀ ಜಮಾವತ್ ವರ್ಗದವರು ನಾವು ಎಷ್ಟು ಸೀಳಿಕೆಗಳಾಗಿದ್ದರೂ ಜಮಾಯತೇ ಇಸ್ಲಾಮ್ ಗುಂಪಿಗಿಂತ ನಾವೇ ದೈವಮಾರ್ಗದಲ್ಲಿ ಮುಂದಿದ್ದೇವೆಂದು ಹೇಳಿಕೊಳ್ಳುತ್ತಾ, ಎರಡು ಮೀನಾರ್‌ಗಳ ಮಸ್ಜೀದ್‌ಗಳು ಏರ್ಪಡಿಸಿಕೊಂಡು ಪ್ರತ್ಯೇಕವಾಗಿ ಕಾಣಿಸುತ್ತಿದ್ದಾರೆ.

ಕ್ರೈಸ್ತವರು, ಮುಸ್ಲೀಮ್‌ರು ವರ್ಗಗಳು, ಸೀಳಿಕೆಗಳು ಎನ್ನುವ ರೂಪದಲ್ಲಿ ಇರುವಾಗ, ಹಿಂದೂ ಮತವು ಕುಲಗಳೆಂಬ ರೂಪದಲ್ಲಿ ಅನೇಕ ಬಣ್ಣಗಳ ಬಟ್ಟೆಗಳಿಂದ ಹೊಲಿದ ರಜಾಯಿ ವಸ್ತ್ರದಂತೆ ತಯಾರಾಗಿದೆ. ಹಾಗೆ ತಯಾರಾಗುವುದಲ್ಲದೆ ಅದರಲ್ಲಿ ಒಂದು ವರ್ಣ(ಕುಲ)ದವರು ದೇವರ ಮುಖದಿಂದ ಹುಟ್ಟಿದವರೆಂದೂ, ಅವರೇ ದೇವರಿಗೆ ಹತ್ತಿರದವರೆಂದೂ, ಉಳಿದ ಕುಲದವರೆಲ್ಲರೂ ದೇವರಿಗೆ ಕೈಗಳಲ್ಲಿಯೂ, ತೊಡೆಗಳಲ್ಲಿಯೂ, ಪಾದಗಳಲ್ಲಿಯೂ, ಹುಟ್ಟಿದ್ದಾರೆಂದೂ, ಕೈಗಳಲ್ಲಿ ಹುಟ್ಟಿದ ಕ್ಷತ್ರಿಯರು ರಾಜ್ಯವನ್ನು ಪಾಲಿಸುವ ರಾಜರಾಗಿ ಇರಬೇಕೆಂದೂ, ತೊಡೆಗಳಲ್ಲಿ ಹುಟ್ಟಿದ ವೈಶ್ಯರು ಒಂದುಕಡೆ ಕುಳಿತುಕೊಂಡು ವ್ಯಾಪಾರ ಮಾಡಿಕೊಳ್ಳಬೇಕೆಂದು, ಪಾದಗಳಲ್ಲಿ ಹುಟ್ಟಿದ ಶೂದ್ರರು ಮೇಲೆ ಹುಟ್ಟಿದ ಮೂರು ಗುಂಪಿನವರಿಗೆ ಸೇವೆಗಳು ಮಾಡುವುದಕ್ಕೋಸ್ಕರ ಇರಬೇಕೆಂದೂ, ದೇವರ ಮುಖದಲ್ಲಿ ಹುಟ್ಟಿದ ಬ್ರಾಹ್ಮಣರು ಮಾತ್ರ ದೇವರ ಆರಾಧನೆ ಮಾಡುತ್ತಾ ದೇವರಿಗೆ ಹತ್ತಿರವಾಗಿ ಇರುತ್ತಾರೆಂದೂ ಪ್ರಚಾರ ಮಾಡಿಕೊಂಡಿದ್ದಾರೆ. ಹಾಗೆ ಪ್ರಚಾರ ಮಾಡುವುದಲ್ಲದೆ ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಹದಿಮೂರನೆಯ (13) ಶ್ಲೋಕದಲ್ಲಿ "ಚಾತುರ್ವರ್ಣ್ಯಂ ಮಯಾ ಸೃಷ್ಟಂ" ನಾಲ್ಕು ವರ್ಣಗಳನ್ನು ಮನುಷ್ಯರಲ್ಲಿ ಸೃಷ್ಟಿಸಿದ್ದೇನೆ ಎಂದು ದೇವರು ಹೇಳಿದಾಗ ಅದನ್ನು ವಕ್ರೀಕರಿಸಿ ದೇವರು ಹೇಳಿದ ಭಾವವನ್ನು ಬಿಟ್ಟು ತಾವು ಸ್ವತಃವಾಗಿ ಅರ್ಥ ಹೇಳುತ್ತಾ ಬ್ರಾಹ್ಮಣ,

ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವಿಧಗಳ ಮನುಷ್ಯರನ್ನು ದೇವರು ಸೃಷ್ಟಿಸಿದ್ದಾನೆಂದು ಹೇಳಿದ್ದಾರೆ.

ಜನಸಂಖ್ಯೆ ಶೇಕಡ 90 ರಷ್ಟಿರುವ ಶೂದ್ರರನ್ನು ಉಳಿದವರಿಗೆ ಸೇವೆ ಮಾಡುವುದಕ್ಕೋಸ್ಕರ ನಿಯಮಿಸಿ ಅವರಿಂದ ಕೆಲಸಗಳನ್ನು ಮಾಡಿಸಿಕೊಳ್ಳುತ್ತಾ, ದೇವರ ಜ್ಞಾನಕ್ಕೆ ಪೂರ್ತಿ ದೂರವಾಗಿ ಇಟ್ಟಿದ್ದಾರೆ. ಈ ವಿಧವಾಗಿ ಹಿಂದೂಗಳಲ್ಲಿ 90 ರಷ್ಟು ಮನುಷ್ಯರನ್ನು ದೇವರಿಗೂ ದೇವರ ಜ್ಞಾನಕ್ಕೂ ದೂರವಾಗಿಟ್ಟು, ಅಂಟಬಾರದವರಾಗಿ ಹೇಳಿ ತಮ್ಮ ಹಿಂದೆ ಬರುವ ಹಾಗೆ ಮಾಡಿಕೊಂಡಿದ್ದಾರೆ. ಮತಯೆನ್ನುವುದೇ ದೊಡ್ಡ ಅಜ್ಞಾನವೆಂದು ನಾವು ಹೇಳುತ್ತಿರುವಾಗ ಅದರಲ್ಲಿ ಸೀಳಿಕೆಗಳು ಮತ್ತಷ್ಟು ಅಜ್ಞಾನ. ಪ್ರತ್ಯೇಕಿಸಿ ಹಿಂದೂಮತದಲ್ಲಿ ಶೂದ್ರರೆಂಬ ಹೆಸರಿನಿಂದ ಅವರ ಮೆದಳಿನಲ್ಲಿ ದೇವರೆಂಬ ಭಾವ ಬಾರದಂತೆ ಮಾಡಿ, ದೇವರಿಗೆ ಅಂಟಬಾರದವರೆಂದು, ದೇವರ ಜ್ಞಾನಕ್ಕೆ ದೂರವಾಗಿ ಒಂದು ವರ್ಣದವರನ್ನು ಇಡುವುದು ಅಜ್ಞಾನದಲ್ಲಿ ಮತ್ತಷ್ಟು ದೊಡ್ಡ ಅಜ್ಞಾನವೆಂದು ಹೇಳಬಹುದು. ಯಾರಾದರೂ ಶೂದ್ರರಾಗಿರುವ ನಮ್ಮಂತಹವರು ದೇವರ ಜ್ಞಾನವನ್ನು ಬೋಧಿಸಿದರೆ, ಅಗ್ರವರ್ಣವಾಗಿ ಹೆಸರುವಾಸಿಯಾದವರು ಪೂರ್ತಿ ಅಸೂಯೆಯನ್ನು ಹೊಂದಿ, ನಮ್ಮ ಹೊರತು ಶೂದ್ರರು ದೈವಜ್ಞಾನಕ್ಕೆ ಅರ್ಹರು ಅಲ್ಲವೆಂಬ ಉದ್ದೇಶದಿಂದ, ಯೋಗಿಯಾಗಿರುವ ನಾವು ಹೇಳುವ ಜ್ಞಾನ ಸಹ ಹಿಂದೂಗಳದು ಅಲ್ಲವೆಂದು, ಪರಮತವನ್ನು ಬೋಧಿಸುತ್ತಿದ್ದೇವೆಂದು, ಏನೂ ತಿಳಿಯದವರನ್ನು ಪ್ರೇರೇಪಿಸಿ, ನಮ್ಮ ಮೇಲೆ ಸಹ ದಾಳಿಗೆ ಕಳಿಸಿದವರು ಇದ್ದಾರೆ. ಮೇಲಾಗಿ ತಾವು ಹಿಂದೂ ಧರ್ಮ ರಕ್ಷಕರೆಂದು, ನಾವು ನಮ್ಮ ಮತವನ್ನು ರಕ್ಷಿಸಿಕೊಳ್ಳುವುದಕ್ಕೆ ಭೌತಿಕದಾಳಿಗಳಾದರೂ ಮಾಡುತ್ತೇವೆಂದು ಹೇಳಿಕೊಳ್ಳುತ್ತಿದ್ದಾರೆ. ತಮಗೆ ಇಷ್ಟವಿಲ್ಲದ ಶೂದ್ರರು ಜ್ಞಾನವನ್ನು ಹೇಳಿದರೇ, ಅವರು ಹಿಂದುಗಳಾದರೂ ಪರಮತದವರಾಗಿ ಕಾಣಿಸುತ್ತಾರೆಂದರೆ ಹಿಂದೂಮತ ಕುಲ ಎಂಬ ಅಜ್ಞಾನದಲ್ಲಿ ಎಷ್ಟು ತಲ್ಲೀನವಾಗಿದೆಯೆಂದು ಹೇಳದೇನೆ ಅರ್ಥವಾಗುತ್ತಿದೆ.

ಕ್ರೈಸ್ತವ, ಮುಸ್ಲಿಮ್ ಮತಗಳು ಎರಡೂ ಕೆಲವು ಸೀಳಿಕೆಗಳಾಗಿದ್ದರೂ ಅವು ಎಲ್ಲವೂ ದೇವರ ವಿಷಯದಲ್ಲಿ ಮುಂದಕ್ಕೆ ಹೋಗುವುದಕ್ಕೆ ಪೋಟಿಪಡುತ್ತಿವೆ. ಒಂದಕ್ಕಿಂತ ಮತ್ತೊಂದು ಮುಂದಿದ್ದೇವೆಂದು ಹೇಳಿಕೊಳ್ಳುತ್ತಿವೆಯಾಗಲಿ, ಹಿಂದೂ ಮತದಲ್ಲಿ ಶೇಕಡ 90 ರಷ್ಟು ಜನಸಂಖ್ಯೆ ಇರುವ ಶೂದ್ರರನ್ನು ದೇವರ ಜ್ಞಾನಕ್ಕೆ ಪೂರ್ತಿ ಅನರ್ಹ ಮಾಡಿದಹಾಗೆ ಉಳಿದ ಯಾವ ಮತದಲ್ಲಾಗಲಿ, ಯಾವ ಗುಂಪನ್ನು ಅಂಟಬಾರದ ಅನರ್ಹರಾಗಿ ಮಾಡಲಿಲ್ಲ. ಹಿಂದೂಮತ ಹೊರತು ಉಳಿದ ಮತದವರು ಎಷ್ಟು ಗುಂಪುಗಳಾಗಿ ಅವರ ಅಂತರ್ಗತದಲ್ಲಿ ಇದ್ದರೂ ಹೊರಗೆ ಮಾತ್ರ ನಮ್ಮ ಮತ ಉಳಿದ ಮತಗಳಿಗಿಂತ ದೊಡ್ಡದೆಂದು, ದೇವರಿಗೆ ಹತ್ತಿರವಾಗಿದೆ ಎಂದು ಹೇಳಿಕೊಳ್ಳುತ್ತಿರುತ್ತಾರೆ. ಉಳಿದ ಎರಡು ಮತಗಳಾದ ಕ್ರೈಸ್ತವ, ಮುಸ್ಲಿಮ್ ಮತಗಳು ಎರಡೂ, ದೇವರ ವಿಷಯದಲ್ಲಿ ಏನೂ ತಿಳಿಯದೆ ಅನರ್ಹರಾಗಿದ್ದ ಹಿಂದೂಮತದಲ್ಲಿ ಶೇಕಡ 90 ರಷ್ಟು ಶೂದ್ರರನ್ನು ತಮ್ಮಕಡೆ ಆಕರ್ಷಿಸಿಕೊಂಡು, ತಮ್ಮ ಮತವನ್ನು ಬೆಳೆಸಿಕೊಳ್ಳಬೇಕೆಂದು ಪ್ರಯತ್ನಮಾಡಲು ಪ್ರಾರಂಭಮಾಡಿವೆ. ಈ ವಿಧವಾಗಿ ಪ್ರಯತ್ನ ಮಾಡುವ ಎರಡು ಮತಗಳಲ್ಲಿ ಕ್ರೈಸ್ತವ ಮತ ಮುಂದುವರೆದು ಶೂದ್ರರಾಗಿರುವ ಎಲ್ಲಾ ಕುಲದವರಿಗು ಸ್ವಲ್ಪ ಜ್ಞಾನ ಹೇಳಿ, ಜ್ಞಾನವೊಂದರ ರುಚಿ ತೋರಿಸಿ ತಮ್ಮಕಡೆ ಸೆಳೆದುಕೊಂಡಿದ್ದಾರೆ. ಜ್ಞಾನದಮೇಲೆ ಶ್ರದ್ಧೆಯಿಲ್ಲದವರಿಗೆ ಸ್ವಲ್ಪ ಉದ್ಯೋಗ ಅವಕಾಶಗಳು ಕೊಟ್ಟು ಬದುಕುವುದನ್ನು ತೋರಿಸಿ ಕೆಲವರನ್ನು, ಆರ್ಥಿಕ ತೊಂದರೆಗಳಿಂದ ಮುಕ್ತಗೊಳಿಸಿ ಕೆಲವರನ್ನು, ಮಾಡಿಕೊಂಡ ಪಾಪಗಳು ಇಲ್ಲದಂತೆ ಹೋಗುತ್ತವೆಯೆಂದು ಹೇಳಿ ಕೆಲವರನ್ನು ತಮ್ಮಕಡೆ ಸೆಳೆದುಕೊಂಡು ಕ್ರೈಸ್ತವರನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ತಮ್ಮ ಗ್ರಂಥವೇ ಅಂತಿಮ ಗ್ರಂಥವೆಂದೂ, ಇದರ ನಂತರ ದೇವರ ಜ್ಞಾನವೇ ಇಲ್ಲವೆಂದು, ನಿಜವಾದ ದೇವರು ನಮ್ಮ ಮತದಲ್ಲಿಯೇ ತಿಳಿಯುತ್ತಾನೆಂದೂ, ಅವರ ಉಪಾಯದಂತೆ ಅವರು ಹೇಳುತ್ತಾ ಸ್ವಲ್ಪಜನ ಹಿಂದೂಗಳನ್ನು ಮುಸ್ಲಿಮ್‌ರು ಸೆಳೆದುಕೊಂಡಿದ್ದಾರೆ. ಮಳೆಬಂದ ಎರಡನೆಯ ದಿನ ಭೂಮಿಯಿಂದ ಒಂದು ಜಾತಿ ಹುಳಗಳು ಹೊರಗೆ ಬಂದರೆ ಸುಲಭವಾಗಿ ಸಿಗುವ ಆಹಾರ ಎಂದು ಚೇಳು, ಕಪ್ಪೆಗಳು

ಮೊದಲಾದವು ತಿನ್ನುವುದಕ್ಕೆ ಬಂದಹಾಗೆ ಸುಲಭವಾಗಿ ತಮ್ಮ ಮಾತುಗಳಿಗೆ ಬೆರಗಾಗುವ ಹಿಂದೂಗಳ ಮೇಲೆ ಉಳಿದ ಎರಡು ಮತಗಳು ಆಕ್ರಮಣ ಮಾಡಿ, ಯಾರಿಗೆ ಯಾರು ಸಿಗುವರೋ ಅವರನ್ನು ತಮ್ಮ ಮತದಲ್ಲಿ ಸೇರಿಸಿಕೊಂಡು ಅವರ ಮತ ಮುದ್ರೆಹಾಕಿ, ಹಿಂದೂ ಎನ್ನುವ ಹೆಸರನ್ನು ಇಲ್ಲದ ಹಾಗೆ ಮಾಡುತ್ತಿದ್ದಾರೆ.

ಸುಮ್ಮನೆ ಸಿಗುವ ಹುಳುಗಳನ್ನು ಚೇಳುಗಳು, ಕಪ್ಪೆಗಳು ಸುಲಭವಾಗಿ ಸಿಲುಕಿಸಿಕೊಂಡು ಭಕ್ಷಿಸುವಹಾಗೆ ಹಿಂದೂಮತದಲ್ಲಿ ದೇವರ ಜ್ಞಾನಕ್ಕೆ ಅನರ್ಹರಾಗಿದ್ದು ಯಾವ ದಾರಿ ತಿಳಿಯದಿರುವ ಹಿಂದೂಗಳನ್ನು ಕ್ರೈಸ್ತರು, ಮುಸ್ಲಿಮ್‌ರು ಸುಲಭವಾಗಿ ತಮ್ಮ ಮತದೊಳಗೆ ಸೇರಿಸಿಕೊಳ್ಳುವುದು ನಡೆಯುತ್ತಿದೆ. ಮುಸ್ಲಿಮ್‌ರು ಸ್ವಲ್ಪ ಆಲಸ್ಯವಾಗಿ ಆ ಕೆಲಸವನ್ನು ಪ್ರಾರಂಭಿಸಿದರೂ, ಕ್ರೈಸ್ತವರು ತಿಳುವಳಿಕೆಯಿಂದ ಮೊದಲೇ ಬೇಟೆ ಪ್ರಾರಂಭಿಸಿ ಭಾರತದೇಶದಲ್ಲಿನ ಹಿಂದೂಗಳನ್ನು ಶೇಕಡ ನಲವತ್ತ (40)ಕ್ಕಿಂತ ಮೇಲೆ ಕ್ರೈಸ್ತವರನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ಕೆಲವು ಪ್ರಾಂತಗಳಲ್ಲಿ ನೂರಕ್ಕೆ ತೊಂಬತ್ತುಜನರು ಹಿಂದೂಗಳಿಂದ ಕ್ರೈಸ್ತವರಾಗಿ ಮಾರ್ಪಟ್ಟಿದ್ದಾರೆ. ಸ್ವಲ್ಪ ಆಲಸ್ಯವಾಗಿ ತಮ್ಮ ಮತ ಕ್ಷೀಣಿಸಿಹೋಗುತ್ತಿದೆಯೆಂದು ತಿಳಿದುಕೊಂಡ ಹಿಂದೂಗಳು ಸ್ವಮತ ರಕ್ಷಣ ಎನ್ನುವ ಘೋಷಣೆಯನ್ನು ತೆರೆಮೇಲೆ ತಂದಿದ್ದಾರೆ. ಕೆರೆಯಲ್ಲಿನ ಮೀನುಗಳನ್ನೆಲ್ಲ ಬೆಸ್ತರೇ (ಮತ್ಸ್ಯಕಾರರೇ) ಹಿಡಿದುಕೊಂಡು ಹೋದರೆ ನಮಗೆ ಏನು ಉಳಿಯುವುದಿಲ್ಲವೆಂದು ತಿಳಿದ ಕೊಕ್ಕರೆಗಳು ಬೆಸ್ತರು ತಮ್ಮ ಕೆರೆ ಹತ್ತಿರಕ್ಕೆ ಬಾರದಂತೆ ಮಾಡುವುದಕ್ಕೆ, ಕೆರೆ ಹತ್ತಿರಕ್ಕೆ ಬಂದವರ ಮೇಲೆ ದಾಳಿಮಾಡಿ, ಮೂಗಿನಿಂದ ಇರಿದು, ಕಾಲಿನಿಂದ ಪರಚಿ, ಎರಡೂ ಕೈಲಾಗದಿರುವಾಗ ಕೊನೆಗೆ ಅವರ ತಲೆಯ ಮೇಲೆ ಹೊಲಸು ಹಾಕಿ ಕೆರೆಗೆ ದೂರವಾಗಿ ಹೋಗುವಂತೆ ಮಾಡುತ್ತಿದ್ದವಂತೆ.

ಬೆಸ್ತರು ಮೀನುಗಳನ್ನು ಮಾರಿಕೊಂಡು ಬದುಕಬೇಕೆಂದುಕೊಂಡರೆ, ಅವರಿಂದ ಕಾಪಾಡುವಂತೆ ಕಾಣಿಸುವ ಕೊಕ್ಕರೆಗಳು, ಮೀನುಗಳನ್ನು ತಾವೇ

ತಿನ್ನಬೇಕೆಂಬ ಸ್ವಾರ್ಥದಿಂದ ದಾಳಿಮಾಡಿದ್ದಾವಾಗಲಿ, ಮೀನುಗಳ ಮೇಲಿನ ದಯೆಯಿಂದಲ್ಲ. ತಿಂಗಳಿಗೊಬ್ಬರೋ, ವಾರಕ್ಕೊಬ್ಬರೋ ಸಮೀಪ ಗ್ರಾಮದಲ್ಲಿ ಯಾರಾದರೂ ಮರಣಿಸಿದರೆ, ಅವರು ಶವದ ಅಂತ್ಯಕ್ರಿಯೆಗಳು ಮಾಡಿದ ನಂತರ ಮೀನುಗಳು ತಮ್ಮ ಕಾಲುಗಳನ್ನು ತಾಕದಂತೆ ದೂರ ಹೋಗುವಹಾಗೆ ನವಧಾನ್ಯಗಳನ್ನು ಕೆರೆಯಲ್ಲಿ ಹಾಕಿ ಸ್ನಾನ ಮಾಡಿಹೋಗುತ್ತಿದ್ದರು. ಆದರೆ ಹಾಗೆ ಅಂತ್ಯಕ್ರಿಯೆಗಳ ನಂತರ ಸ್ನಾನಕ್ಕೆ ಬಂದು ನವಧಾನ್ಯಗಳನ್ನು ಕೆರೆಯಲ್ಲಿ ಬೆರೆಸಿ ಮೀನುಗಳಿಗೆ ಒಳ್ಳೆಯದು ಮಾಡುವವರನ್ನು ನೋಡಿದ ಕೊಕ್ಕರೆಗಳು, ಅವರೂ ಸಹ ಮೀನುಗಳು ಹಿಡಿಯಲು ಬಂದಿದ್ದಾರೆಂದು ತಿಳಿದು, ಸ್ನಾನ ಮಾಡಲು ಬಂದಿರುವವರ ಮೇಲೆ ಸಹ ಕೊಕ್ಕರೆಗಳು ದಾಳಿ ಮಾಡಿವೆಯಂತೆ. ಮೀನುಗಳಿಗೆ ಧಾನ್ಯ ಹಾಕಿ ಅವು ಬೆಳೆಯುವುದಕ್ಕೆ ಸಹಕರಿಸುವವರ ಮೇಲೆ ಸಹ ಕೊಕ್ಕರೆಗಳು ದಾಳಿಮಾಡುವುದು ನೋಡಿ ಅಲ್ಲಿಗೆ ಬಂದವರು, ಆ ಕೊಕ್ಕರೆಗಳಿಗೆ ಕುರುಡ ಕೊಕ್ಕರೆಗಳೆಂದು ಹೆಸರಿಟ್ಟಿದ್ದಾರೆ. ಹಾಗೆ ಇಟ್ಟಿರುವ ಹೆಸರು ಶಾಶ್ವತವಾಗಿ ನಿಂತುಹೋಗಿದೆ. ಮಾತುಗಳ ಸಂದರ್ಭದಲ್ಲಿ ಕುರುಡ ಕೊಕ್ಕರೆಯಂತೆ ತಪ್ಪು ಮಾಡಿದ್ದಾರೆನ್ನುವುದು ಕೇಳುತ್ತಿದ್ದೇವೆ.

ಹಿಂದೂಮತದಲ್ಲಿ ಶೂದ್ರರೆಲ್ಲರೂ ಕೆರೆಯಲ್ಲಿನ ಮೀನುಗಳಂತೆ ಇರುವಾಗ, ಅಗ್ರಕುಲದವರು ಕೊಕ್ಕರೆಗಳಂತಿದ್ದು, ಕ್ರೈಸ್ತರು, ಮುಸ್ಲಿಮ್‌ರು ಎನ್ನುವ ಇತರ ಮತದವರನ್ನು ಮೀನು ಹಿಡಿಯುವವರಾಗಿ (ಬೆಸ್ತರು) ತಿಳಿದು, ತಮ್ಮ ಮತದಲ್ಲಿ ಮೀನಿನಂತಿರುವ ಶೂದ್ರರನ್ನು ತಮ್ಮ ಆಧೀನದಲ್ಲಿ ಇಲ್ಲದ ಹಾಗೆ ಮಾಡುತ್ತಿದ್ದಾರೆಂಬ ಭಾವದಿಂದ, ಹಿಂದೂ ಧರ್ಮರಕ್ಷಣ ಸಂಘಗಳನ್ನು ಏರ್ಪಾಟು ಮಾಡಿ ಕ್ರೈಸ್ತರನ್ನು, ಮುಸ್ಲಿಮ್‌ರನ್ನು ತಮ್ಮ ಮತದ ಹತ್ತಿರಕ್ಕೆ ಬಾರದಂತೆ ಮಾಡುವುದಕ್ಕೆ, ಮತಾಂತರ ಮಾಡದಂತಿರುವುದಕ್ಕೆ ಸ್ವಲ್ಪ ಪ್ರಯತ್ನ ಮಾಡುತ್ತಿದ್ದಾರೆ. ಮೀನುಗಳ ಸಂರಕ್ಷಣೆ ತಮ್ಮ ಕರ್ತವ್ಯ ಎಂದು ಹೇಳುತ್ತಿರುವ ಕೊಕ್ಕರೆಗಳು, ಮೀನುಗಳಿಗೆ ಆಹಾರ ಧಾನ್ಯಹಾಕಿ ಒಳ್ಳೆಯದು ಮಾಡುವ ಮನುಷ್ಯರ ಮೇಲೆ ಸಹ ದಾಳಿಮಾಡಿ, ಕುರುಡಕೊಕ್ಕರೆಗಳಂತೆ ಪ್ರವರ್ತಿಸಿದಂತೆ, ಹಿಂದೂ

ರಕ್ಷಕರೆಂಬುವವರು ತಮ್ಮ ಮತಕ್ಕೆ ಜ್ಞಾನವನ್ನು ಹೇಳಿ, ಸತ್ಯವನ್ನು ತಿಳಿಸಿ ಇತರ ಕುಲಗಳಿಗು, ಮತಗಳಿಗು ಒಳಗಾಗದಂತೆ ಮಾಡುವ ಜ್ಞಾನಿಗಳನ್ನು ಸಹ ನಂಬದೆ, ಅವರು ಹೇಳುವ ಜ್ಞಾನ ತಿಳಿಯದೇ, ತಮ್ಮ ಮತದಲ್ಲಿನ ಗುರುಗಳ ಮೇಲೆ ಸಹ ದಾಳಿಮಾಡುತ್ತಾ ಕುರುಡ ಕೊಕ್ಕರೆಗಳಂತೆ ಪ್ರವರ್ತಿಸುತ್ತಿದ್ದಾರೆ. ಕೊಕ್ಕರೆಗಳು ಯಾರು ಒಳ್ಳೆಯವರೆಂದು ತಿಳಿಯದೇ ದಾಳಿಮಾಡಿರಬಹುದು. ಆದರೆ ಹಿಂದೂ ಮತದಲ್ಲಿ ಜ್ಞಾನ ಹೇಳುವ ಗುರುಗಳು ತಮ್ಮ ಜ್ಞಾನವನ್ನೇ ಹೇಳುತ್ತಿದ್ದಾರೆಂದು ತಿಳಿದರೂ, ಕುಲಹುಚ್ಚಿನಿಂದ ನಾವು ಗುರುಗಳಾಗಿ ಚಲಾವಣೆಯಾಗಬೇಕೆಂದು, ನಮಗಿಂತ ಕಡಿಮೆಕುಲದವರು ಗುರುಗಳಾಗಿ ಚಲಾವಣೆ ಆಗಬಾರದೆಂಬ ಭಾವದಿಂದ, ಹಿಂದೂಗಳಿಗೆ ಜ್ಞಾನ ಹೇಳಿ ಒಳ್ಳೆಯದು ಮಾಡುವವರನ್ನು ಪರಮತ ಬೋಧಕರೆಂದು ಹೆಸರಿಟ್ಟು ಗುರುಗಳಾದವರನ್ನು ಸಹ ಹಿಂಸಿಸುವುದು ಪ್ರಾರಂಭಿಸಿದ್ದಾರೆ. ಈ ವಿಧವಾಗಿ ಅಗ್ರವರ್ಣದವರು ಹಿಂದೂ ಮತದಲ್ಲಿನ ಉಳಿದ ಕುಲದವರನ್ನು ಮೇಲಕ್ಕೆ ಬಾರದಂತೆ ಮಾಡುವುದರಿಂದ ಹಿಂದೂ ಮತ ಅಭಿವೃದ್ಧಿಯಾಗದೆ, ಇರುವುದು ಇದ್ದಂತೆ ಸಹ ಇಲ್ಲದಹಾಗೆ ಬೇಗನೇ ಕ್ಷೀಣಿಸಲು ಪ್ರಾರಂಭಿಸಿದೆ.

ನಾವು ಆಧ್ಯಾತ್ಮಿಕ ವಿದ್ಯೆಯಲ್ಲಿ ಐವತ್ತು ಗ್ರಂಥಗಳನ್ನು ರಚಿಸಿ ನೂರೈವತ್ತು ಉಪನ್ಯಾಸಗಳನ್ನು ಹೇಳಿದರೂ, ನಾವು ಅಗ್ರಕುಲದವರು ಅಲ್ಲವೆಂಬ ನೆಪದಿಂದ, ಪರಮತವನ್ನು ಬೋಧಿಸುತ್ತಿದ್ದಾನೆಂದು ನಿಂದಿಸಿ ಪ್ರಚಾರ ಮಾಡಿ ಪ್ರಜೆಗಳಿಂದ ದೂರ ಮಾಡಬೇಕೆಂದು ಹಿಂದೂ ಧರ್ಮ ರಕ್ಷಕರೆಂಬುವವರು ಬಹಳಬಾರಿ ಪ್ರಯತ್ನಿಸಿದ್ದಾರೆ. ವಾಸ್ತವವಾಗಿ ಹಿಂದೂ ಧರ್ಮವೆಂದರೆ ಏನೊ ತಿಳಿಯದವರು, ಧರ್ಮರಕ್ಷಕರೆಂದು ಹೆಸರು ಇಟ್ಟುಕೊಂಡಮಾತ್ರಕ್ಕೆ ಧರ್ಮರಕ್ಷಕರಾಗುತ್ತಾರಾ? ನಾವು ಹೇಳುವ ಜ್ಞಾನದ ಮುಂದೆ ಅವರ ಯುಕ್ತಿಗಳು, ಕುಯುಕ್ತಿಗಳು ಏನು ಮಾಡಲಾರದೆ ಹೋಗಿವೆ. ಕೊನೆಗೆ ಪ್ರಜೆಗಳು ನಮ್ಮ ಜ್ಞಾನದಲ್ಲಿನ ಔನ್ನತ್ಯವನ್ನು ಗ್ರಹಿಸಿದವರಾಗಿ, ಮೂರು ಮತದವರು ನಮ್ಮ ಹತ್ತಿರಕ್ಕೆ ಸೇರಿ ಒಂದೇ ಜ್ಞಾನವನ್ನು ತಿಳಿಯುವುದರಿಂದ ಎಲ್ಲರೂ ಆಶ್ಚರ್ಯಹೋಗುವುದು ನಡೆದಿದೆ. ನಮ್ಮ ಜ್ಞಾನದಲ್ಲಿ

ದೇವರು ಎನ್ನುವ ವಿಧಾನ ಹೊರತು, ಮತ ಎಂಬ ವಿಧಾನ ಇಲ್ಲದಿರುವುದರಿಂದ, ಮೂರು ಮತದವರು ನಮ್ಮ ಜ್ಞಾನವನ್ನು ತಿಳಿದುಕೊಂಡು ನಮ್ಮ ಮತಗಳು ಬೇರೆಯಾದರೂ ನಮ್ಮ ಜ್ಞಾನ ಒಂದೇ, ನಮ್ಮ ದೇವರು ಒಬ್ಬನೇ ಎಂದು ಹೇಳಿಕೊಳ್ಳುವುದು ನಮಗೆ ಸಂತೋಷದಾಯಕವೇ ಆದರೂ, ಕೆಲವರು ಹಿಂದೂಗಳಿಗೆ ನಮ್ಮ ಮೇಲೆ ಅಸೂಯೆಯಿಂದ ಇರುವುದು, ಅದು ಒಂದು ವರ್ಗಕ್ಕೆ ಸೇರಿದವರಿಗೆ ಅಸೂಯೆಯಿಂದ ಇರುವುದು ನೋಡಿದರೆ ಹಿಂದೂಗಳಲ್ಲಿ ಮತ ಮಾಯೆಯೇ ಅಲ್ಲದೆ, ಕುಲಹುಚ್ಚು ಎನ್ನುವ ರೋಗ ಸಹ ತೀವ್ರವಾಗಿ ಇದೆಯೆಂದು ಹೇಳಬಹುದು. ಇಲ್ಲಿಯವರೆಗು ಈ ದಿನ ಭೂಮಿಮೇಲೆ ಮೂರು ಮತಗಳಿರುವ ವಿಧಾನ, ಆ ಮೂರು ಮತಗಳು ಎಷ್ಟೆಷ್ಟು ಅಜ್ಞಾನದಲ್ಲಿವೆ ಎಂದು, ಸೂಚನಾಪ್ರಾಯವಾಗಿ ಹೇಳಿಕೊಂಡಿದ್ದೇವೆ.

ಇಂತಹ ಪರಿಸ್ಥಿತಿಯಲ್ಲಿ ಒಬ್ಬ ಯೋಗಿಯಾಗಿ ನಾವು ಮಾಡಬೇಕಾದ ಕರ್ತವ್ಯ ಏನು? ಎಂದು ಯೋಚಿಸಿ ಪ್ರಜೆಗಳೆಲ್ಲರಿಗೂ ಮೂರು ಮತಗಳಲ್ಲಿ ಮಾಯೆ ಎಷ್ಟು ತೀವ್ರವಾಗಿ ಇದೆಯೋ, ಇರುವುದು ಇದ್ದಂತೆ ತಿಳಿಸಬೇಕೆಂದುಕೊಂಡಿದ್ದೇವೆ. ಹಾಗೆ ತಿಳಿಸುವುದರಿಂದ ಮತ ಎನ್ನುವ ಮಾಯೆಯ ಬಲೆಯಲ್ಲಿ ಮನುಷ್ಯ ಸಿಲುಕಿಕೊಳ್ಳದಹಾಗೆ ಇರುತ್ತಾನೆಂದು, ಹಾಗೆ ಇರುವಾಗಲೇ ಮನುಷ್ಯನಿಗೆ ಅಸಲಾದ ಜ್ಞಾನ ತಿಳಿದು, ಅಸಲಾದ ದೇವರನ್ನು ಆಶ್ರಯಿಸ ಬಲ್ಲನೆಂದು ತಿಳಿದಿದ್ದೇವೆ. ದೇವರು ತಿಳಿಸಿದ ಅಸಲಾದ ಧರ್ಮಗಳು ಮೂರು ಮೂಲ ಗ್ರಂಥಗಳಾದ ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಇವೆಯೆಂದು ತಿಳಿಸಬೇಕೆಂದುಕೊಂಡಿದ್ದೇವೆ. ಅದು ತಿಳಿದಾಗ ಎಲ್ಲಾ ಮತಗಳು ದೇವರ ದೃಷ್ಟಿಯಲ್ಲಿ ಸಮಾನವೆಂದು ತಿಳಿಯುತ್ತದೆ. ಹಾಗೆ ತಿಳಿದಾಗ ಭೂಮಿ ಮೇಲೆ ಮತಾಂತರಗಳೆಂಬ ಸಮಸ್ಯೆಯೇ ಇರುವುದಿಲ್ಲ. ಮತಾಂತರಗಳು ಇಲ್ಲದಿರುವಾಗ ಮತದ್ವೇಷಗಳು ಇರುವುದಿಲ್ಲ. ಆಗ ಜಗತ್ತು ಏಕ ಕುಟುಂಬವಾಗುತ್ತದೆ.

ಜಗತ್ತು ಏಕ ಕುಟುಂಬ ಆಗುವುದಕ್ಕೆ ನಾವು ಜವಾಬ್ದಾರಿಯಿಂದ ನಮ್ಮ ಕೈಲಾದಷ್ಟು ಪ್ರಯತ್ನ ಮಾಡಬೇಕಾಗಿರುತ್ತದೆ. ಆ ನೇತೃತ್ವದಲ್ಲಿ ಕೆಲವು

ಮತಗಳಲ್ಲಿ ಮನುಷ್ಯರು ಮಾಡುವ ತಪ್ಪುಗಳನ್ನು ಕೆಲವು ಕಡೆ ಎತ್ತಿ ತೋರಿಸಿ ಅವುಗಳನ್ನು ಸರಿಪಡಿಸಬೇಕಾಗಿರುತ್ತದೆ. ಹಾಗೆಯೇ ಕೆಲವು ಸಂದರ್ಭಗಳಲ್ಲಿ ಕೆಲವರನ್ನು ಎಚ್ಚರಿಸಿ ನೀವು ಮಾಡುತ್ತಿರುವುದು ಅಧರ್ಮವೆಂದು, ಅಜ್ಞಾನವೆಂದು ಹೇಳಬೇಕಾಗಿರುತ್ತದೆ. ಮತ್ತೆ ಕೆಲವುಕಡೆ ದೈವ ಗ್ರಂಥದಲ್ಲಿನ ವಾಕ್ಯಗಳನ್ನು ವಿವರಿಸಿ ಹೇಳಿ, ಇದರ ಪ್ರಕಾರ ನಡೆದಾಗಲೇ ದೇವರು ತಿಳಿಯುತ್ತಾನೆಂದು ಹೇಳಬೇಕಾಗಿರುತ್ತದೆ. ಕೆಲವು ಸಮಯಗಳಲ್ಲಿ ಕೆಲವರು ಅಜ್ಞಾನಿಗಳು ನೀವು ಹೇಳುವುದು ಜ್ಞಾನವೇ ಅಲ್ಲವೆಂದು ಎದುರುತಿರಿಗಿ ಮಾತನಾಡಿದರೂ ಸಹಿಸಿಕೊಂಡು, ಸರಿಯಾದ ಸಮಾಧಾನದಿಂದ ಅವರನ್ನು ನಿಜ ಜ್ಞಾನದಕಡೆ ಮಾರ್ಪಡಿಸಬೇಕಾಗಿರುತ್ತದೆ. ದೈವ ಗ್ರಂಥಗಳನ್ನು ಹೊರತು ಉಳಿದ ವೇದಗಳನ್ನು, ಪುರಾಣಗಳನ್ನು ಖಂಡಿಸಿ ಹೇಳಬೇಕಾಗಿರುತ್ತದೆ. ಇವೆಲ್ಲ ಮಾಡುವುದಕ್ಕೆ ಮುಖ್ಯವಾಗಿ ಮನುಷ್ಯನಿಗೆ ನಿದಾನ, ಸಹನೆಗಳು ಇರುವುದೇ ಅಲ್ಲದೆ, ನಿಜವಾದ ದೈವಜ್ಞಾನ ತನಗೆ ತಿಳಿದಿರಬೇಕು. ಇವೆಲ್ಲವೂ ತಿಳಿದು ನಾವು ಆತ್ಮ ಪ್ರೇರಣೆಯಿಂದ ಪ್ರಜೆಗಳಿಗೆ ದೈವಜ್ಞಾನವನ್ನು ತಿಳಿಸಬೇಕೆಂದು ಕೊಂಡಿದ್ದೇವೆ. ಪ್ರಜೆಗಳಲ್ಲಿ ಯಾವ ಮತದವರಾದರೂ ಇರಬಹುದು. ಆದರೂ ಎಲ್ಲರಿಗೂ ಸಮಾನವಾಗಿ ಅವರಲ್ಲಿನ ತಪ್ಪುಗಳನ್ನು ತೆಗೆದುಹಾಕಿ ಒಳ್ಳೆಯ ಮಾರ್ಗವನ್ನು ತೋರಿಸಬೇಕೆಂಬುವುದೇ ನಮ್ಮ ಉದ್ದೇಶ. ಆದ್ದರಿಂದ ನಾವು ಹೇಳುವ ಜ್ಞಾನವನ್ನು ಯಾರಾಗಲಿ ಅಸೂಯೆಯಿಂದ ನೋಡದಂತೆ ಶ್ರದ್ಧೆಯಿಂದ ತಿಳಿಯಬೇಕೆಂದು ತಿಳಿಸುತ್ತಿದ್ದೇವೆ.

ಈಗ ಹೇಳುತ್ತಿರುವ ಗ್ರಂಥದ ಹೆಸರು **“ಇಂದೂ–ಕ್ರೈಸ್ತವನಾ?”** ಎನ್ನುವ ಪ್ರಶ್ನೆಯಿಂದ ಪ್ರಾರಂಭವಾಗುತ್ತದೆ. ಮೊದಲು ಇಂದೂ ಮತದಲ್ಲಿರುವವನು ಕ್ರೈಸ್ತವ ಮತದೊಳಗೆ ಬದಲಾದರೆ ಕ್ರೈಸ್ತವನಾಗುತ್ತಾನಾ ಎನ್ನುವುದು ಇದರಲ್ಲಿನ ಸಮಾಚಾರವೆಂದು ಹೆಸರನ್ನನುಸರಿಸಿ ತಿಳಿದುಹೋಗುತ್ತಿದೆ. ಆದರೆ ಎಲ್ಲರೂ ಅಂದುಕೊಂಡಷ್ಟು ಸುಲಭವಾದ ಸಮಾಚಾರ ಇದರಲ್ಲಿ ಇಲ್ಲ. ಇಲ್ಲಿ ಇಂದೂ ಅಂದರೇ ಏನು? ಕ್ರೈಸ್ತವನೆಂದರೇ ಏನು? ಎನ್ನುವ ವಿಷಯವನ್ನು ಕುರಿತು ಹೆಚ್ಚಾಗಿರುತ್ತದೆ. ಇದರಲ್ಲಿನ ಭಾಗವಾಗಿ ಮೊದಲು ಒಂದು ಪ್ರಶ್ನೆ ಹಾಕಿಕೊಳ್ಳೋಣ.

ಅದೇನೆಂದರೆ! ಒಬ್ಬ ಇಂದೂನಲ್ಲಿಯೂ ಹಾಗೆಯೇ ಮತ್ತೊಬ್ಬ ಕ್ರೈಸ್ತವನಲ್ಲಿಯೂ ಭೌತಿಕವಾಗಾಗಲಿ, ಮಾನಸಿಕವಾಗಾಗಲಿ ಏನು ವ್ಯತ್ಯಾಸವಿದೆ? ಎನ್ನುವುದು ಪ್ರಶ್ನೆ? ಈ ಪ್ರಶ್ನೆಯನ್ನು ಕುರಿತು ಮೊದಲು ಸ್ವಲ್ಪ ಜ್ಞಾನವನ್ನು ತಿಳಿದ ಒಬ್ಬ ಮನುಷ್ಯನನ್ನು ಪ್ರಶ್ನಿಸಿ ನೋಡೋಣ.

**ಪ್ರಶ್ನೆ :–** ನೀನು ಪ್ರಸ್ತುತ ಕಾಲದಲ್ಲಿರುವ ಮತಗಳಲ್ಲಿ ಯಾವ ಮತಕ್ಕೆ ಸಂಬಂಧಿಸಿದವನು?

**ಉತ್ತರ :–** ನಾನು ಕ್ರೈಸ್ತವ ಮತಸ್ಥನು. ನನ್ನ ಮತವನ್ನು ಕುರಿತು ನಿನಗೇನು ಕೆಲಸ? ನಿಮಗೆ ಏನುಬೇಕೊ ಅದನ್ನು ಕೇಳಿರಿ.

**ಪ್ರಶ್ನೆ :–** ದಯಮಾಡಿ ಪ್ರಶ್ನೆಯನ್ನು ನನಗೆ ಬಿಟ್ಟುಬಿಡಿ. ಉತ್ತರವನ್ನು ನೀವು ಹೇಳಿರಿ. ಸಮಾಜದಲ್ಲಿ ಮನುಷ್ಯರಲ್ಲಿರುವ ಕೆಲವು ಅನುಮಾನಗಳನ್ನು, ಸ್ವಲ್ಪ ಅಜ್ಞಾನವನ್ನು ತೆಗೆದುಹಾಕುವುದಕ್ಕೆ ನಿಮ್ಮನ್ನು ಈ ವಿಧವಾಗಿ ಪ್ರಶ್ನಿಸಬೇಕಾಗಿ ಬಂದಿದೆ. ನಿಮಗೆ ತಿಳಿದ ಸಮಾಧಾನವನ್ನು ಹೇಳಿರಿ, ನಿಮ್ಮ ಸಮಾಧಾನ ವನ್ನನುಸರಿಸಿ ಲೋಕದಲ್ಲಿ ಎಷ್ಟೋಜನ ಒಳ್ಳೆಯವರಾಗಬಹುದು. ಆದ್ದರಿಂದ ನೀವು ಸ್ವಲ್ಪ ಸಹನೆಯಿಂದ ಸಮಾಧಾನ ಹೇಳಿರಿ. ಈಗ ನೀವು ಕ್ರೈಸ್ತವರೆಂದು ತಿಳಿದಿದೆ. ಆದರೆ ನೀವು ಬೋಧಕರಾಗಿ ಇದ್ದೀರಾ? ಅಥವಾ ಸಾಧಾರಣ ಮನುಷ್ಯನಾಗಿ ಇದ್ದೀರಾ?

**ಉತ್ತರ :–** ನಾನು ಕ್ರೈಸ್ತವ ಮತ ಬೋಧಕನು. ಬೈಬಲ್‌ನನ್ನು ಕುರಿತು ಏನು ಕೇಳಿದರೂ ಹೇಳಬಲ್ಲೆನು.

**ಪ್ರಶ್ನೆ :–** ನನಗೆ ಬೈಬಲ್ ಕುರಿತು ಸಂಪೂರ್ಣವಾಗಿ ತಿಳಿಯದು. ಬೈಬಲ್‌ನಲ್ಲಿರುವ ಅರವತ್ತಾರು (66) ಪಾಠಗಳಲ್ಲಿ ನಾಲ್ಕು ಪಾಠಗಳಾದ ಮತ್ತಯಿ, ಮಾರ್ಕು ಲೂಕಾ, ಯೋಹಾನ್ ಸುವಾರ್ತೆಗಳು ಮಾತ್ರ ತಿಳಿದಿದೆ. ಅವಶ್ಯಕತೆಯನ್ನನುಸರಿಸಿ ಅದರಲ್ಲಿನ ವಿಷಯಗಳನ್ನು ಕೇಳುತ್ತೇನೆ. ಇದೆಲ್ಲವು ಇತರರು ಚೆನ್ನಾಗಿರುವುದ ಕ್ಕೋಸ್ಕರ, ಜ್ಞಾನಿಗಳಾಗಿ ಮಾರ್ಪಡುವುದಕ್ಕೋಸ್ಕರ ಕೇಳುತ್ತಿದ್ದೇನೆಯೇ ಹೊರತು

ಬೇರೆ ಉದ್ದೇಶ ಇಲ್ಲವೆಂದು ಮೊದಲೇ ಹೇಳುತ್ತಿದ್ದೇನೆ. ಆದ್ದರಿಂದ ನೀವು, ನಿಮಗೆ ತಿಳಿದ ಸರಿಯಾದ, ಸಮಾಧಾನವನ್ನು ಕೊಡಬಲ್ಲರೆಂದು ಆಶಿಸುತ್ತಾ, ಮೊದಲು ಒಂದು ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಒಬ್ಬ ಹಿಂದುವಿ (ಇಂದೂ) ನಲ್ಲಿ ಮತ್ತೊಬ್ಬ ಕ್ರೈಸ್ತವನಲ್ಲಿ ಭೌತಿಕವಾಗಿ ಏನು ವ್ಯತ್ಯಾಸವಿದೆ?

**ಉತ್ತರ :–** ಭೌತಿಕವಾಗಿ ಯಾವ ವ್ಯತ್ಯಾಸ ಇರುವುದಿಲ್ಲ. ಮಾನಸಿಕವಾಗಿಯೇ ಹಿಂದೂವಿಗೂ ಮತ್ತು ಕ್ರೈಸ್ತವನಿಗೂ ಎಷ್ಟೋ ವ್ಯತ್ಯಾಸ ಇರುತ್ತದೆ. ಹಿಂದೂಗಳ ಮನಸ್ಸಿನಲ್ಲಿ ಎಷ್ಟೋ ಜನ ದೇವತೆಗಳು ಇರುತ್ತಾರೆ. ಅವರು ಮಳೆಗಾಲದಲ್ಲಿ ಮಳೆದೇವರನ್ನು, ಬೇಸಿಗೆಕಾಲದಲ್ಲಿ ಅಗ್ನಿ ದೇವರನ್ನು ಪೂಜಿಸುತ್ತಿರುತ್ತಾರೆ. ಹಾಗೆಯೇ ಕಾಲವನ್ನನುಸರಿಸಿ ಬರುವ ಹಬ್ಬಗಳನ್ನು ಏರ್ಪಡಿಸಿಕೊಂಡು ಶ್ರೀರಾಮನವಮಿ ಬಂದಾಗ ಶ್ರೀರಾಮನನ್ನು, ಆಂಜನೇಯ ಜಯಂತಿ ಬಂದಾಗ ಆಂಜನೇಯನನ್ನು ಪೂಜಿಸುತ್ತಿರುತ್ತಾರೆ. ಆಂಜನೇಯನು ರಾಮನ ಬಂಟ, ಸೇವಕನು ಎಂದು ಎಲ್ಲರಿಗೂ ತಿಳಿದಿದೆ. ಆದರೂ ಶ್ರೀರಾಮನವಮಿ ದಿನ ರಾಮನೇ ದೇವರೆಂದು ಪೂಜಿಸಿದವರು, ಆಂಜನೇಯ ಜಯಂತಿ ದಿನ ರಾಮನನ್ನು ಮರೆತುಹೋಗಿ ಆತನ ಸೇವಕನನ್ನೇ ದೇವರಾಗಿ ಭಾವಿಸಿ ಪೂಜಿಸುತ್ತಿರುತ್ತಾರೆ. ರಾಮನು ದೊಡ್ಡ, ಆಂಜನೇಯನು ಸಣ್ಣವನೆಂದು ಹೇಳಿದ ಹಿಂದೂಗಳೇ ಕೆಲವು ಸಮಯಗಳಲ್ಲಿ ಕೆಲವು ಹಬ್ಬಗಳಲ್ಲಿ ಇಬ್ಬರಿಗೂ ಸಮಾನ ಪೀಠವನ್ನು ಹಾಕುತ್ತಿದ್ದಾರೆ. ಆಗ ಗುರುವನ್ನು ಶಿಷ್ಯನನ್ನು ಒಂದೇ ಮಂಚದ ಮೇಲೆ ಕೂರಿಸಿ ಒಂದೇ ಗೌರವವನ್ನು ಕೊಟ್ಟಂತಾಗುತ್ತದಲ್ಲವೆ! ಹಾಗೆ ಮಾಡುವುದು ತಪ್ಪಲ್ಲವೇ! ಅದೇ ರೀತಿ ಶಿವರಾತ್ರಿ ದಿನ ಶಿವನನ್ನು ಪೂಜಿಸಿ ನೀನೇ ದೇವರು, ನಿನ್ನ ಹೊರತು ಭೂಮಿಮೇಲೆ ನಿನ್ನನ್ನು ಮೀರಿದ ದೇವರು ಬೇರೆ ಯಾರೂ ಇಲ್ಲವೆಂದು ಪೂಜಿಸುತ್ತಾರೆ. ಸ್ವಲ್ಪ ಕಾಲಕಳೆದ ನಂತರ ಕೆಲವು ತಿಂಗಳಿಗೇ ವಿನಾಯಕ ಚವಿತಿ ಬಂದರೆ ಆಗ ವಿನಾಯಕನನ್ನು ಶಿವನಿಗಿಂತ ಹೆಚ್ಚಾಗಿ ಪೂಜಿಸುತ್ತಾರೆ. ಶಿವರಾತ್ರಿ ದಿನ ಮಾತ್ರ ಶಿವನನ್ನು ಹೊಗಳಿ ಪೂಜಿಸಿದವರು, ವಿನಾಯಕ ಚವಿತಿ ಒಂದು ದಿನ ಇದ್ದರೂ ವಿನಾಯಕನನ್ನು ಮೂರು ದಿನಗಳು

ಸ್ವಲ್ಪಜನ, ಒಂಭತ್ತು ದಿನಗಳು ಸ್ವಲ್ಪಜನ, ಹನ್ನೊಂದು ದಿನಗಳು ಸ್ವಲ್ಪಜನ ಪೂಜಿಸಿ ಕೊನೆಯ ದಿನ ದೊಡ್ಡದಾಗಿ ಮೆರವಣಿಗೆ ಮಾಡುತ್ತಿದ್ದಾರೆ.

ಶಿವನ ಮಗ ವಿನಾಯಕನು ಎಂದು ಹೇಳುವ ಹಿಂದೂಗಳು ಶಿವರಾತ್ರಿ ದಿನ ತಂದೆಯನ್ನು ದೇವರೆನ್ನುತ್ತಿದ್ದಾರೆ. ಶಿವರಾತ್ರಿ ದಿನ ತಂದೆಯನ್ನು ದೇವರೆಂದವರೇ ಮಾತು ಬದಲಾಯಿಸಿ ವಿನಾಯಕ ಚವಿತಿ ದಿನ ಮಗನಾದ ವಿನಾಯಕನನ್ನು ದೇವರೆನ್ನುತ್ತಿದ್ದಾರೆ. ತಂದೆಗಿಂತ ಹೆಚ್ಚು ದಿನಗಳು ವಿನಾಯಕನ ಮಂಟಪಕಟ್ಟಿ ಪೂಜಿಸಿ ಶಿವನನ್ನು ಒಂದುದಿನ ಮಾತ್ರ ಪೂಜಿಸುವುದು ಮಗನ ಮುಂದೆ ತಂದೆಯನ್ನು ಕಡಿಮೆ ಮಾಡಿದ ಹಾಗೆ ಅಲ್ಲವೇ! ನಮ್ಮ ಲೆಕ್ಕದಲ್ಲಿ ತಂದೆ ದೇವರಾ? ಮಗ ದೇವರಾ? ಎಂದು ಅನುಮಾನ ಬರುತ್ತಿದೆ. ಎಲ್ಲಾದರೂ ದೇವರು ಒಬ್ಬನೇ ಇರುತ್ತಾನಲ್ಲವೆ! ಅಂತಹದರಲ್ಲಿ ಕೆಲವುಕಡೆ ಯಜಮಾನನಾದ ರಾಮನನ್ನು ದೇವರೆಂದವರೇ, ಮತ್ತೆ ಕೆಲವುಕಡೆ ಸೇವಕನಾದ ಆಂಜನೇಯನನ್ನು ದೇವರು ಎನ್ನುತ್ತಿದ್ದಾರೆ. ಶಿವನ ವಿಷಯಕ್ಕೆ ಬರುವಷ್ಟರಲ್ಲಿ ಶಿವರಾತ್ರಿಗೆ ತಂದೆಯಾದ ಶಿವನು ದೇವರಾದರೆ, ವಿನಾಯಕ ಚವಿತಿಗೆಲ್ಲ ಮಗನಾದ ವಿನಾಯಕನೇ ದೇವರಾಗುತ್ತಿದ್ದಾನೆ. ಇದೇನಾದರೂ ನೀತಿಯಾಗಿ ಇದೆಯಾ? ನ್ಯಾಯವಾಗಿ ಇದೆಯಾ? ತಂದೆಗಿಂತ ಮಗನನ್ನು ಹೆಚ್ಚಾಗಿ ಗೌರವಿಸುವುದಾಗಲಿ, ಸಮಾನವಾಗಿ ಪೂಜಿಸುವುದಾಗಲಿ ಮಾಡುವುದರಿಂದ ತಂದೆಯಾದ ಶಿವನನ್ನು ಅವಮಾನ ಮಾಡಿದ ಹಾಗೆ ಅಲ್ಲವೆ! ನಿಮ್ಮ ಮತದಲ್ಲಿ ಯಾರು ದೇವರೋ ಹೇಳಲಾರದೆ ಒಬ್ಬೊಬ್ಬರು ಒಂದೊಂದು ದೇವರನ್ನು ಹೇಳುತ್ತಿದ್ದಾರೆ. ಎಲ್ಲಾದರೂ ಪ್ರಪಂಚಕ್ಕೆ ಅಧಿಪತಿ ಆದವನು, ಪ್ರಪಂಚವನ್ನು ಸೃಷ್ಟಿಸಿದ ಸೃಷ್ಟಿಕರ್ತನಾದವನು ಒಬ್ಬನೇ ದೇವರಿರುತ್ತಾನೆಯೇ ಹೊರತು, ಇಷ್ಟುಜನ ದೇವರುಗಳಿರುತ್ತಾರಾ? ಕೊನೆಗೆ ಪ್ರಾಣಿಗಳನ್ನು ಸಹ ದೇವರಾಗಿ ಹೇಳಿಕೊಳ್ಳುವ ಮಾನಸಿಕ ಸ್ಥಿತಿಯಲ್ಲಿ ಹಿಂದೂ ಗಳಿದ್ದಾರೆ. ಕ್ರೈಸ್ತವರಾದ ನಾವು ಹಾಗೆ ಇಲ್ಲ. ನಮಗೆ ಒಬ್ಬನೇ ದೇವರು ಆ ದೇವರನ್ನೇ ಪ್ರಾರ್ಥಿಸುತ್ತೇವೆ ಹೊರತು ಇತರರನ್ನು ಪ್ರಾರ್ಥಿಸುವುದಿಲ್ಲ. ಆದ್ದರಿಂದ

ಹಿಂದೂಗಳು, ಕ್ರೈಸ್ತವರು ಎಲ್ಲರೂ ಮನುಷ್ಯರೇ ಆದರೂ ಹಿಂದೂಗಳ ಮನೋಭಾವಗಳು ಬೇರೆಯಾಗಿವೆ. ಕ್ರೈಸ್ತವರ ಮನೋಭಾವಗಳು ಬೇರೆಯಾಗಿವೆ.

**ಪ್ರಶ್ನೆ :–** ನೀವು ಹೇಳಿದ ವಿಷಯದಿಂದ ನಾವೂ ಸಹ ಏಕೀಭವಿಸುತ್ತೇವೆ. ಆದರೆ ಹಿಂದೂಗಳಾದವರೆಲ್ಲ ನೀವು ಹೇಳಿದಹಾಗೆ ಇದ್ದಾರಾ ಎಂದು ನೋಡಿದರೆ ಹೆಚ್ಚಾಗಿ ಹಾಗೆಯೇ ಇದ್ದರೂ, ಬಹುಸ್ವಲ್ಪಜನ ಹಿಂದೂಗಳ ದೈವ ಗ್ರಂಥವಾಗಿ ಹೇಳುತ್ತಿರುವ ಭಗವದ್ಗೀತೆ ಒಂದರ ಜ್ಞಾನದ ಪ್ರಕಾರ ಒಬ್ಬ ದೇವರನ್ನೇ ಆಶ್ರಯಿಸಿ, ಒಬ್ಬ ದೇವರನ್ನೇ ಆರಾಧಿಸುತ್ತಾ, ದೈವ ಜ್ಞಾನವನ್ನು ಅನುಸರಿಸಿ ಪದ್ಧತಿಯಂತಿದ್ದಾರೆ. ನೀವು ಮನೋಭಾವದಲ್ಲಿ ಒಂದೇ ದೇವರನ್ನು ಒಂದೇ ಜ್ಞಾನವನ್ನು ಆಶ್ರಯಿಸಿದಹಾಗೆ ಹಿಂದುಗಳಲ್ಲಿ ಸಹ ಕೆಲವರು ಇರುವುದರಿಂದ ಅವರು ನಿಮ್ಮೊಂದಿಗೆ ಸಮಾನವಾಗಿ ಇದ್ದಂತೆ ಅಲ್ಲವೆ? ಅಂತಹವರು ನಿಮಗೆ ಸಮಾನವಾಗಿ ದೈವಮಾರ್ಗದಲ್ಲಿ ಇದ್ದಾರೆಂದು ಒಪ್ಪಿಕೊಳ್ಳುತ್ತೀರಲ್ಲ?

**ಉತ್ತರ :–** ಹಿಂದೂಮತದಲ್ಲಿ ಒಂದೇ ದೇವರನ್ನು ಆಶ್ರಯಿಸಿ, ಇತರ ದೇವತೆಗಳನ್ನು ಒಪ್ಪಿಕೊಳ್ಳದೆ ಇರುವವರನ್ನು ನಾನು ಎಲ್ಲಿಯೂ ಇಲ್ಲಿಯವರೆಗು ನೋಡಲಿಲ್ಲ. ಆದ್ದರಿಂದ ನಮ್ಮ ಭಾವನೆಯಲ್ಲಿ ಹಿಂದೂಗಳು ಅಂದರೆ ಮಾರ್ಗ ತಪ್ಪಿ ನಡೆಯುವವರೆಂದು ನಾವು ಲೆಕ್ಕಿಸಿಕೊಂಡಿದ್ದೇವೆ. ಆದರೆ ನೀವು ಹೇಳಿದಹಾಗೆ ಭಗವದ್ಗೀತೆ ಪ್ರಕಾರ ಒಂದೇ ದೇವರನ್ನು ಆಶ್ರಯಿಸಿದವರು ಹಿಂದೂಗಳಲ್ಲಿ ಎಲ್ಲಾದರೂ ಇದ್ದರೆ, ಅಂಥವರನ್ನು ನಮಗೆ ಸಮಾನವಾಗಿ ಒಂದೇ ದೇವರನ್ನು ಆರಾಧಿಸುವವರಾಗಿ ಲೆಕ್ಕಿಸುತ್ತೇವೆ. ಆದರೆ ನಮ್ಮ ಬೈಬಲ್ ಪ್ರಕಾರ "ಯೆಹೋವಾ"ಒಬ್ಬನೇ ದೇವರು ಎಂದು ನಾವು ಅಂದುಕೊಳ್ಳುತ್ತಿದ್ದೇವೆ. ಆ ವಿಷಯವನ್ನು ತಿಳಿಸಿರುವುದು ದೇವರ ಕುಮಾರನಾದ ಯೇಸು. ಯೇಸು ಮದುವೆ ಮಾಡಿಕೊಳ್ಳದೆ ಬ್ರಹ್ಮಚಾರಿಯಾಗಿ, ಧರಿಸುವುದಕ್ಕೆ ಎರಡನೆಯ ವಸ್ತ್ರ ಇಲ್ಲದೆ, ನಿರಾಸೆಯಾಗಿ ಬದುಕಿ ಮೂರು ವರ್ಷಗಳು ದೇವರ ಜ್ಞಾನವನ್ನು ಪ್ರಜೆಗಳಿಗೆ ಬೋಧಿಸಿದ್ದಾನೆ. ಆತನು ದೇವರ ಕುಮಾರನು ಎಂದು ನಿರೂಪಣೆ ಮಾಡಿಕೊಳ್ಳುವುದಕ್ಕೆ ಸತ್ತುಹೋಗಿ ಮೂರನೆಯ ದಿನ ಎದ್ದಿರುವವನು. ಅಂತಹ

ಯೇಸು ಹೇಳಿದ ಜ್ಞಾನ ನಿಜವಾದ ಜ್ಞಾನವೆಂದು ನಾವು ನಂಬುತ್ತಿದ್ದೇವೆ. ಆತನು ಹೇಳಿದ ಬೈಬಲನ್ನು ಆಧಾರ ಮಾಡಿಕೊಂಡು ನಾವು ಜ್ಞಾನಪದ್ಧತಿಯಾಗಿ ಇದ್ದೇವೆ. ಹಿಂದೂಗಳೇನೊ ಎಂಟು ಮಂದಿ ಪತ್ನಿಯರಿರುವ ಕೃಷ್ಣನು, ವಿಲಾಸವಂತವಾದ ಜೀವನವನ್ನು ಕಳೆದ ಕೃಷ್ಣನು ಹೇಳಿದ ಭಗವದ್ಗೀತೆಯನ್ನು ಅದೂ ಕೆಲವರು ಹಿಂದೂಗಳು ಆಶ್ರಯಿಸಿದ್ದಾರೆಂದು ಒಂದೇ ದೇವರನ್ನು ಆರಾಧಿಸುತ್ತಿದ್ದಾರೆಂದು ನೀವು ಹೇಳುತ್ತಿದ್ದೀರ. ಕೃಷ್ಣನು ಯೇಸುವಿನಂತೆ ದೇವರ ಕುಮಾರನು ಅಲ್ಲವಲ್ಲ! ವಿಲಾಸ ಜೀವನವನ್ನು ಕಳೆದು ಜೀವನದಲ್ಲಿ ಎಲ್ಲಿಯೂ ಜ್ಞಾನ ಹೇಳದವನು ಒಂದು ಕಡೆ ಒಂದು ದಿನ ಅದೂ ಕೆಲವು ನಿಮಿಷಗಳು ಜ್ಞಾನವನ್ನು ಹೇಳಿದರೆ, ಆತನು ಹೇಳಿರುವುದು ನಿಜವಾದ ಜ್ಞಾನವೆಂದು, ಆತನು ಬೋಧಿಸಿರುವುದು ನಿಜವಾದ ದೇವರನ್ನೇ ಎಂದು ಹೇಗೆ ನಂಬಬೇಕು? ಆದ್ದರಿಂದ ನೀವು ಅಂದುಕೊಂಡ ಹಾಗೆ ಹಿಂದೂಗಳು ಸರಿಯಾದ ದೇವರನ್ನು ನಂಬಲಿಲ್ಲವೇನೊ, ಆಗ ಅವರು ನಮಗೆ ಸಮಾನ ಅಲ್ಲವಲ್ಲವೆ!

**ನನ್ನ ಪ್ರಶ್ನೆ :–** ಅನುಮಾನಗಳನ್ನು ವ್ಯಕ್ತ ಪಡಿಸುವುದರಲ್ಲಿ ತಪ್ಪಿಲ್ಲ. ಅನುಮಾನಗಳು ತೀರಿದ ನಂತರ ನಿಜವಾದ ಸತ್ಯ ಯಾರಿಗಾದರೂ ತಿಳಿಯುತ್ತದೆ. ನಿನ್ನ ಅನುಮಾನಗಳು ತೀರುವುದಕ್ಕೆ ಒಂದು ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಉತ್ತರ ಹೇಳಿರಿ. ಕೃಷ್ಣನ ವಿಷಯವನ್ನು ಪಕ್ಕಕ್ಕಿಟ್ಟು ಯೇಸುವನ್ನು ಕುರಿತು ಕೇಳುತ್ತಿದ್ದೇನೆ. ಯೇಸು ದೇವರ ಕುಮಾರನು ಆದಾಗ ದೇವರು ಅಲ್ಲದಂತೆಯೇ ಅಲ್ಲವೆ! ನಮ್ಮಲ್ಲಿನ ಸಂದೇಹದದ ಪ್ರಕಾರ ಯೇಸು ದೇವರ ಕುಮಾರನಾ? ಮನುಷ್ಯ ಕುಮಾರನಾ?

**ಉತ್ತರ :–** ಯೇಸು ದೇವರ ಕುಮಾರನೇ, ತಂದೆಯಾದ ಯೆಹೋವಾ ಕಳಿಸಿದಾಗ ಬಂದವನು, ಆದ್ದರಿಂದ ಆತನು ನಿಶ್ಚಯವಾಗಿಯೂ ದೇವರ ಕುಮಾರನೇ.

**ನನ್ನ ಪ್ರಶ್ನೆ :–** ದೇವರಿಗೆ ಕುಮಾರನಿದ್ದರೆ ಕುಮಾರಿನಿಗೆ ತಾಯಿ ಸಹ ಇರಬೇಕು. ಆಗ ದೇವರಿಗೆ ಪತ್ನಿ ಇದ್ದಂತೆ ಅಲ್ಲವೆ! ತಂದೆ ಯೆಹೊವಾ, ಕುಮಾರನು ಯೇಸು, ತಾಯಿ ಯಾರು? ಅಂದರೆ ದೇವರ ಪತ್ನಿ ಯಾರು?

**ಉತ್ತರ :–** ದೇವರಿಗೆ ಪತ್ನಿ ಇದ್ದಂತೆ ನಮ್ಮ ಗ್ರಂಥದಲ್ಲಿ ಬರೆಯಲಿಲ್ಲ. ದೇವರ ಕುಮಾರನು ಯೇಸು ಎಂದು ಮಾತ್ರವೇ ಇದೆ.

**ನನ್ನ ಪ್ರಶ್ನೆ :–** ಬರೆದಿರುವುದೇ ನಂಬಿದಾಗ ಭಗವದ್ಗೀತೆಯಲ್ಲಿ ನಾನೇ ದೇವರು ಎಂದು ಕೃಷ್ಣನು ಹೇಳಿದಾಗ ಏಕೆ ನಂಬಲಿಲ್ಲ. ಯೇಸು ನನಗೆ ತಂದೆ ಇದ್ದಾನೆಂದು ಹೇಳಿದ್ದಾನಾ? ತಂದೆಯಾದ ಯೆಹೋವಾ ನನಗೆ ಕುಮಾರನಿದ್ದಾನೆಂದು ಹೇಳಿದ್ದಾನಾ?

**ಉತ್ತರ :–** ಯೇಸುವೇ ತಂದೆಯನ್ನು ಕುರಿತು ಹೇಳಿದ್ದಾನೆ. ಎಲ್ಲರಿಗೂ ತಂದೆ ಯೆಹೋವಾನೆ ಎಂದೂ ಸಹ ಹೇಳಿದ್ದಾನೆ.

**ನನ್ನ ಪ್ರಶ್ನೆ :–** ಎಲ್ಲರಿಗೂ ಅಂದರೆ ಕೇವಲ ಕ್ರೈಸ್ತವರಿಗೇನಾ ಅಥವಾ ಸಮಸ್ತ ಮಾನವರಿಗಾ?

**ಉತ್ತರ :–** ಕ್ರೈಸ್ತವರಿಗೆ ಮಾತ್ರವೇ ಎಂದು ಹೇಳಲಿಲ್ಲ. ಆದ್ದರಿಂದ ಸಮಸ್ತ ಮನುಷ್ಯರೆಲ್ಲರಿಗೂ ಎಂದು ಹೇಳಬಹುದು.

**ನನ್ನ ಪ್ರಶ್ನೆ :–** ಸರ್ವಮಾನವರಿಗೂ ತಂದೆಯನ್ನು ಕುರಿತು ಬೈಬಲ್ ಗ್ರಂಥದಲ್ಲಿ ಹೇಳಲಾಗಿದೆ. ಬೈಬಲ್ ಗ್ರಂಥದಲ್ಲಿ ದೇವರ ಸಮಾಚಾರ ಇದೆ. ಆದಕಾರಣ ಬೈಬಲನ್ನು ದೇವರ ಗ್ರಂಥವೆಂದು ನಾವೂ ಸಹ ಹೇಳುತ್ತಿದ್ದೇವೆ. ಹಾಗೆ ಭಗವದ್ಗೀತೆಯಲ್ಲಿ ಸಹ ದೇವರ ಜ್ಞಾನ ಇದೆ. ಹಾಗಿರುವಾಗ ಭಗವದ್ಗೀತೆಯನ್ನು ನೀವೂ ಸಹ ದೈವ ಗ್ರಂಥವಾಗಿ ಒಪ್ಪಿಕೊಳ್ಳಬಹುದಲ್ಲವೆ! ಯಾರು ಒಪ್ಪಿಕೊಂಡರು ಒಪ್ಪಿಕೊಳ್ಳದೆಹೋದರು ಪ್ರಪಂಚದಲ್ಲಿ ದೈವ ಗ್ರಂಥಗಳು ಮೂರು ಇವೆ. ಒಂದು ಪ್ರಥಮ ದೈವ ಗ್ರಂಥ ಭಗವದ್ಗೀತೆ, ಎರಡು ದ್ವಿತೀಯ ದೈವ ಗ್ರಂಥ ಬೈಬಲ್, ಮೂರು ಅಂತಿಮ ದೈವ ಗ್ರಂಥ ಖುರ್‌ಆನ್. ಈ ಮೂರು ಗ್ರಂಥಗಳಲ್ಲಿ ಮಾರ್ಪಡಿಸಿ ಮಾರ್ಪಡಿಸಿ ದೇವರ ವಿಷಯಗಳೆ ಹೇಳಲ್ಪಟ್ಟಿವೆ. ಭಗವದ್ಗೀತೆಯಲ್ಲಿ ಎಲ್ಲರಿಗೂ ತಂದೆ ನಾನೇ ಎಂದು ಹೇಳಿದವನು ಮನುಷ್ಯನಾಗಿರುವ ಕೃಷ್ಣನು. ಮನುಷ್ಯನಾಗಿ ಕಾಣಿಸುವ ಕೃಷ್ಣನು ಕಾಣಿಸದ ದೇವರು ನಾನೇ ಎಂದಿದ್ದಾನೆ.

ಬೈಬಲ್ ಗ್ರಂಥದಲ್ಲಿ ತಂದೆಯಾದ ದೇವರ ಕುಮಾರನು ನಾನೇ ಎಂದು ಯೇಸು ಹೇಳಿದ್ದಾನೆ. ಮನುಷ್ಯನಾಗಿರುವ ಯೇಸು ಕಾಣಿಸದ ದೇವರ ಕುಮಾರನೆಂದು ಹೇಳಿದ್ದಾನೆ. ಎರಡುಕಡೆ ಕಾಣಿಸುವ ಮನುಷ್ಯನೇ ಹೇಳಿದಾಗ ಕೇಳಿದ್ದೇವೆ. ಕಾಣಿಸುವ ಮನುಷ್ಯ ನಾನೇ ದೇವರೆಂದು ಒಂದುಕಡೆ, ನಾನು ದೇವರ ಕುಮಾರನೆಂದು ಮತ್ತೊಂದು ಕಡೆ ಹೇಳಿರುವುದನ್ನನುಸರಿಸಿ ನೋಡಿದರೆ ಇವರು ಇಬ್ಬರೂ ಸಾಮಾನ್ಯ ಮನುಷ್ಯರು ಅಲ್ಲವೆಂದು ತಿಳಿಯುತ್ತಿದೆ. ಭಗವದ್ಗೀತೆ ಯಲ್ಲಾಗಲಿ, ಬೈಬಲ್ ಗ್ರಂಥದಲ್ಲಾಗಲಿ ಪ್ರತ್ಯಕ್ಷವಾಗಿ ದೇವರು ಹೇಳಲಿಲ್ಲ. ಪ್ರತ್ಯಕ್ಷವಾಗಿ ಕಾಣಿಸುವ ಮನುಷ್ಯನೇ ಹೇಳಿದ್ದಾನೆ. ಬೈಬಲ್‌ನಲ್ಲಿ ಯೇಸು ಹೇಳಿದ ಮಾತಿನ ಪ್ರಕಾರ ದೇವರು ಹೆಸರಿಗೆ ಮಾತ್ರ ಇದ್ದಾನೆಂದು ತಿಳಿದಿದೆ, ದೇವರ ಪತ್ನಿ ಬಗ್ಗೆ ತಿಳಿಯದು. ಹಾಗೆಯೇ ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದರ ಪ್ರಕಾರ ಯಾರಿಗೂ ಕಾಣಿಸದ ದೇವರು ಮನುಷ್ಯನಾಗಿ ಹೇಗೆ ಕಾಣಿಸುತ್ತಿದ್ದಾನೆಂದು ಪ್ರಶ್ನಿಸಿರುವುದಕ್ಕೂ ಸಹ ಉತ್ತರ ತಿಳಿಯದು. ನಾನು ದೇವರು ಎಂದು ಹೇಳಿದ ಕೃಷ್ಣನ ಮಾತಿಗೂ, ನಾನು ದೇವರ ಕುಮಾರನು ಎಂದು ಹೇಳಿದ ಯೇಸು ಮಾತಿಗೂ ಪ್ರತ್ಯಕ್ಷವಾಗಿ ಉತ್ತರ ಇಲ್ಲ. ಆದರೆ ಯಾರ ಅಂತರಂಗದಲ್ಲಿ ಅವರು ಈ ಪ್ರಶ್ನೆಗಳಿಗೆ ಉತ್ತರವನ್ನು ತಿಳಿದುಕೊಳ್ಳಬೇಕಾಗಿದೆ. ಈ ಎರಡು ಪ್ರಶ್ನೆಗಳಿಗು ಉತ್ತರಗಳು ಅವರವರ ಶ್ರದ್ಧೆಮೇಲೆ, ಅವರವರ ವಿಶ್ವಾಸದ ಮೇಲೆ ಆಧಾರಪಟ್ಟಿ ರುತ್ತವೆ. ಯೇಸು ಹೇಳಿದ ಮಾತಿನ ಪ್ರಕಾರ ಯೇಸು ದೇವರ ಕುಮಾರನು ಎಂದು ಹೇಗೆ ನಂಬುತ್ತಿದ್ದೇವೊ ಹಾಗೆಯೇ ಕೃಷ್ಣನು ದೇವರೇ ಎನ್ನುವ ಮಾತನ್ನು ಸಹ ನಂಬಬೇಕಾಗಿ ಬರುತ್ತಿದೆ. ಒಂದುವೇಳೆ ಹಿಂದೂಗಳಾದವರು, ಭಗವದ್ಗೀತೆ ಮೇಲೆ ಪ್ರೇಮ ಇರುವವರು ಕೃಷ್ಣನು ದೇವರೇ ಎಂದು ನಂಬಬಹುದು. ಕ್ರೈಸ್ತವರಾಗಿರುವವರು ನಂಬುತ್ತಾರಾ?

**ಉತ್ತರ :–** ನಾವು ಸ್ವಲ್ಪವೂ ಸಹ ನಂಬುವುದಿಲ್ಲ. ಕ್ರೈಸ್ತವರಾಗಿರುವ ಯಾರೂ ಕೃಷ್ಣನನ್ನು ದೇವರೆಂದು ನಂಬುವುದಿಲ್ಲ.

**ನನ್ನ ಪ್ರಶ್ನೆ :–** ಕ್ರೈಸ್ತವರು ಕೃಷ್ಣನನ್ನು ನಂಬುವುದಿಲ್ಲ. ಹಿಂದೂಗಳು ಯೇಸುವನ್ನು

ನಂಬುವುದಿಲ್ಲ. ಯಾರ ಇಷ್ಟಬಂದಂತೆ ಅವರು ಪ್ರವರ್ತಿಸಿದರೆ ಅಜ್ಞಾನ ಹೊರತು ಜ್ಞಾನ ಯಾರ ಹತ್ತಿರ ಇಲ್ಲದಂತೆ ಹೋಗುತ್ತದೆ. ಮೊಂಡಿಯಾಗಿ ವಾದಿಸುವುದಕ್ಕಿಂತ ಇಂತಹ ಕಾರಣದಿಂದ ನಾವು ನಂಬುವುದಿಲ್ಲ ಎಂದು ಯಾರಾದರೂ ಹೇಳಬಲ್ಲರಾ? ಯೇಸುನನ್ನು ಏಕೆ ನಂಬುವುದಿಲ್ಲ ಎಂದು ಕೇಳಿದರೆ ಶಾಸ್ತ್ರಬದ್ಧವಾದ ಸಮಾಧಾನ ಹಿಂದೂಗಳ ಹತ್ತಿರವಿಲ್ಲ. ಹಾಗೆಯೇ ಕೃಷ್ಣನ ಮಾತನ್ನು ಏಕೆ ನಂಬುವುದಿಲ್ಲ ಎಂದರೆ ಸೂತ್ರಬದ್ಧವಾದ ಉತ್ತರ ಕ್ರೈಸ್ತರ ಹತ್ತಿರವೂ ಇಲ್ಲ. ಕುರುಡರಂತೆ ಯಾರ ಮತವನ್ನು ಅವರು ದೊಡ್ಡದಾಗಿ ಹೇಳಿಕೊಳ್ಳುವುದು ಬಿಟ್ಟರೆ ದೇವರು ಕೊಟ್ಟ ದೈವ ಗ್ರಂಥಗಳಲ್ಲಿ ದೇವರು ಕೊಟ್ಟಿರುವ ಜ್ಞಾನವನ್ನು ನೋಡುತ್ತಿಲ್ಲ. ಕ್ರೈಸ್ತ ಮತದಲ್ಲಿ ಬಹಳಜನರಿಗೆ ಯೇಸುನನ್ನು ಕುರಿತು ಯೇಸು ಯಾರೋ, ಎಲ್ಲಿಂದ ಬಂದಿದ್ದಾನೋ ಎಲ್ಲಿಗೆ ಹೋಗಿದ್ದಾನೋ ತಿಳಿಯದು. ಹಾಗೆ ಹಿಂದೂಗಳಿಗೂ ಕೃಷ್ಣನನ್ನು ಕುರಿತು ತಿಳಿಯದು. ಕೃಷ್ಣನು ಯಾರೋ ಸಂಪೂರ್ಣವಾಗಿ ತಿಳಿದವರು ಹಿಂದೂಗಳಲ್ಲಿ ಸಹ ಇಲ್ಲ. ತಮ್ಮ ಮತದಲ್ಲಿನ ಕೃಷ್ಣನನ್ನು ಕುರಿತು ತಿಳಿಯದ ಹಿಂದೂಗಳು ಪರಮತದಲ್ಲಿನ ಯೇಸುವನ್ನು ಕುರಿತು ಹೇಗೆ ಹೇಳುತ್ತಾರೆ? ಹಾಗೆಯೇ ತಮ್ಮ ಯೇಸುನನ್ನು ಕುರಿತು ಪೂರ್ತಿ ಯಾಗಿ ತಿಳಿಯದ ಕ್ರೈಸ್ತವರು ಪರಮತದಲ್ಲಿನ ಕೃಷ್ಣನನ್ನು ಕುರಿತು ಹೇಗೆ ತಿಳಿಯುತ್ತಾರೆ. ಆದ್ದರಿಂದ ಎರಡು ಮತದವರಿಗು ತಮ್ಮ ಪ್ರವಕ್ತರಾದ ಕೃಷ್ಣನನ್ನು ಕುರಿತಾಗಲಿ, ಯೇಸುವನ್ನು ಕುರಿತಾಗಲಿ ತಿಳಿಯದು ಎಂದೇ ಹೇಳಬಹುದು.

ಹಾಗಿರುವಾಗ ನಮಗೆ ನಮ್ಮ ಯೇಸುನನ್ನು ಕುರಿತು ನಾವು ಒಪ್ಪಿಕೊಳ್ಳುತ್ತೇವೆಂದು ಕ್ರೈಸ್ತವರು ಅಂದರೆ ಅದು ಅವರು ಕುರುಡರಂತೆ ಹೇಳುವ ಮಾತೇಯಾಗಲಿ, ವಾಸ್ತವವಾಗಿ ಅವರಿಗೆ ಯೇಸು ಬಗ್ಗೆ ತಿಳಿಯದು. ಹಾಗೆಯೇ ಕೃಷ್ಣನ ಬಗ್ಗೆ ಹಿಂದೂಗಳು ಆತನು ದೇವರೆಂದು ಒಪ್ಪಿಕೊಳ್ಳುತ್ತೇವೆ ಅಂದರೆ ಅದೂ ಸಹ ಅವರು ಕುರುಡರಾಗಿ ಹೇಳುವ ಮಾತೆಂದು ಅರ್ಥವಾಗುತ್ತಿದೆ. ಹಾಗೆಯೇ ಕೃಷ್ಣನನ್ನು ನಾವು ಒಪ್ಪಿಕೊಳ್ಳುವುದಿಲ್ಲ ಎಂದು ಕ್ರೈಸ್ತವರೆಂದರೂ,

ಯೇಸುನನ್ನು ನಾವು ಒಪ್ಪಿಕೊಳ್ಳುವುದಿಲ್ಲವೆಂದು ಹಿಂದೂಗಳೆಂದರೂ ಇಬ್ಬರೂ ಕುರುಡರಂತೆ ಮಾತನಾಡುವ ಮಾತುಗಳೇ ಆಗಲಿ, ಏಕೆ ಒಪ್ಪಿಕೊಳ್ಳುವುದಿಲ್ಲವೋ ಆಧಾರ ತೋರಿಸಿ ಇಬ್ಬರೂ ಹೇಳಲಿಲ್ಲ. ಯಾರ ಮತವನ್ನು ಅವರು ಪ್ರಚಾರ ಮಾಡಿಕೊಳ್ಳುವುದಕ್ಕೆ ಹಿಂದೂಗಳು ಯೇಸುನನ್ನು, ಕ್ರೈಸ್ತರು ಕೃಷ್ಣನನ್ನು ಅಗೌರವವಾಗಿ ಮಾತನಾಡುತ್ತಿದ್ದಾರೆ. ಭಗವದ್ಗೀತೆಯಾಗಲಿ, ಬೈಬಲ್ಲಾಗಲಿ, ಎರಡೂ ದೈವ ಗ್ರಂಥಗಳಾದಾಗ ಅದರಲ್ಲಿ ದೇವರು ಪರೋಕ್ಷವಾಗಿ ಹೇಳಿದ ಮಾತುಗಳು ಪೂರ್ತಿ ಸತ್ಯವಾಗಿರುವಾಗ, ಮನುಷ್ಯರು ಎರಡು ಗ್ರಂಥಗಳನ್ನು ಎರಡು ಮತಗಳಾಗಿ ಹೇಳಿಕೊಂಡು, ಮತ ಎನ್ನುವ ಮಾಯೆಯಲ್ಲಿ ಬಿದ್ದು, ದೇವರ ಮಾತನ್ನು ಕೇಳದಂತೆ ತನ್ನ ಮಾತನ್ನೇ ದೊಡ್ಡದಾಗಿ ಹೇಳಿಕೊಳ್ಳುತ್ತಾ, ಹಿಂದೂ ಯೇಸುನನ್ನು, ಕ್ರೈಸ್ತವರು ಕೃಷ್ಣನನ್ನು ಒಪ್ಪಿಕೊಳ್ಳದ ಸ್ಥಿತಿಯಲ್ಲಿ ಇದ್ದಾರೆ. ಅಷ್ಟೇ ಅಲ್ಲದೆ ಮತದ್ವೇಷಗಳು ಬೆಳೆಸಿಕೊಂಡು ಒಬ್ಬರನ್ನೊಬ್ಬರು ಹಿಂಸಿಸಿಕೊಳ್ಳುವ ಸ್ಥಿತಿಗೆ ಸೇರಿಹೋಗಿದ್ದಾರೆ. ಈಗ ನೇರವಾಗಿ ಒಂದು ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಈ ಪ್ರಶ್ನೆಗಳು ಇತರರಿಗೆ ಜ್ಞಾನಮಾರ್ಗದಲ್ಲಿ ಕಣ್ತೆರೆಸುವುದಕ್ಕೆ ಹೊರತು, ಅಗೌರಪಡಿಸುವುದಕ್ಕೆಂದು ತಿಳಿಯಬಾರದು. ಯೇಸು ದೇವರ ಕುಮಾರನಾ? ಹಾಗಾದರೆ ವಿವರವಾಗಿ ಹೇಳುತ್ತೀರಾ?

**ಉತ್ತರ :–** ತಂದೆ, ಕುಮಾರನು, ಪರಿಶುದ್ಧಾತ್ಮಯೆಂದು ಬೈಬಲ್ ಗ್ರಂಥದಲ್ಲಿ ಇದೆ. ಅಲ್ಲಿ ತಂದೆ ಕುಮಾರನೆಂದು ಹೇಳಲಾಗಿದೆಯಲ್ಲವೆ! ಅದನ್ನನುಸರಿಸಿ ಯೇಸು ದೇವರ ಕುಮಾರನೆಂದು ಹೇಳಬಹುದು.

**ಪ್ರಶ್ನೆ :–** ಬೈಬಲ್ ಮತ್ತಾಯ ಸುವಾರ್ತೆ ಕೊನೆಯ 28ನೇ ಅಧ್ಯಾಯದಲ್ಲಿ 19ನೇ ವಾಕ್ಯದಲ್ಲಿ ತಂದೆ, ಕುಮಾರ, ಪರಿಶುದ್ಧಾತ್ಮ ಎಂದು ಇದೆ. ಇಲ್ಲಿ ತಂದೆ, ಕುಮಾರನು, ಪರಿಶುದ್ಧಾತ್ಮ ಎಂದು ಮೂರು ಹೆಸರುಗಳು ಬಂದಿವೆ. ಈ ಮೂವರಲ್ಲಿ ತಂದೆ ಯಾರೋ, ಕುಮಾರನು ಯಾರೋ, ಪರಿಶುದ್ಧಾತ್ಮ ಯಾರೋ ಯಾರಿಗೂ ಸರಿಯಾಗಿ ಅರ್ಥವಾಗಲಿಲ್ಲ. ಮೂವರನ್ನು ಬಿಡಿಬಿಡಿಯಾಗಿ ವಿವರಿಸಿ ಯಾರೂ ಹೇಳಲಿಲ್ಲ. ಹಾಗಿರುವಾಗ ತಂದೆ, ಕುಮಾರನು ಎನ್ನುವ ಇಬ್ಬರಿಗೂ

ದೇವರು, ದೇವರ ಕುಮಾರನು ಯೇಸು ಎಂದು ಹೇಳಿದರೆ, ತಂದೆಯಿಂದ ಯೇಸು ಹುಟ್ಟಲಿಲ್ಲವೆಂದು ಪರಿಶುದ್ಧಾತ್ಮನಿಂದ ಹುಟ್ಟಿದ್ದಾನೆಂದು ಕೆಲವರು ಹೇಳುವುದಕ್ಕೆ ಅವಕಾಶ ಇದೆ. ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆ 1ನೇ ಅಧ್ಯಾಯದಲ್ಲಿ 21ನೇ ವಚನದಲ್ಲಿ "ಆಕೆ ಗರ್ಭ ಧರಿಸಿರುವುದು ಪರಿಶುದ್ಧಾತ್ಮನಿಂದ" ಎಂದು ಇದೆ. ಆದ್ದರಿಂದ ಯೇಸು ಪರಿಶುದ್ಧಾತ್ಮ ಕುಮಾರನಾ? ಅಥವಾ ತಂದೆ ಕುಮಾರನಾ? ಎಂದು ಪ್ರಶ್ನಿಸಿದರೆ ಯಾವಕಡೆ ಹೇಳಲಾರದ ಪರಿಸ್ಥಿತಿ ಕ್ರೈಸ್ತವರಲ್ಲಿ ಇದೆ. ಏಕೆಂದರೆ ಬೈಬಲ್ ಗ್ರಂಥದಲ್ಲಿ ಕೆಲವುಕಡೆ ಯೇಸು ತಂದೆ ಕುಮಾರನೆಂದು ಹೇಳಲಾಗಿದೆ. ಕೆಲವು ಕಡೆಯೇನೊ ಪರಿಶುದ್ಧಾತ್ಮ ಕುಮಾರನೆಂದು ಹೇಳಲಾಗಿದೆ. ಇದನ್ನನುಸರಿಸಿ ಕ್ರೈಸ್ತವರ ಹತ್ತಿರ ಸರಿಯಾದ ಸಮಾಧಾನ ಇಲ್ಲ. ಸಮಾಧಾನ ಇಲ್ಲದಿದ್ದರೂ ಬೈಬಲ್ ಗ್ರಂಥದಲ್ಲಿನ ವಾಕ್ಯಗಳು ಸರಿಯಾಗಿ ಅರ್ಥವಾಗದಿದ್ದರೂ, ಕೆಲವರು ಕುರುಡ ನಂಬಿಕೆಯಿಂದ ಹೇಳುತ್ತಿದ್ದಾರೆ. ಆದರೆ ಹಾಗೆ ನಂಬಿದವರು ಉಳಿದ ದೈವ ಗ್ರಂಥಗಳಲ್ಲಿನ ವಿಷಯಗಳನ್ನು ಸಹ ಹಾಗೆಯೇ ನಂಬಬೇಕಲ್ಲವೆ! ಒಂದುವೇಳೆ ಯಾರಾದರೂ ವಿವರವಾಗಿ ಹೇಳಿದಾಗಲಾದರೂ ನಂಬಬೇಕಲ್ಲವೆ! ಹಾಗೆ ನಂಬದೇ ಹೋಗುವುದಕ್ಕೆ ಕಾರಣ ನಾನು ಇಂತಹ ಮತಸ್ಥನೆಂಬ ಅಜ್ಞಾನ ಹೊರತು ಬೇರೆ ಅಲ್ಲವೆಂದು ತಿಳಿಯುತ್ತಿದೆ. ಬೈಬಲ್‌ನಲ್ಲಿ ತಂದೆ ಪರಿಶುದ್ಧಾತ್ಮ ವಿಷಯದಲ್ಲಿ ಸಂದಿಗ್ಧತೆ ಇದ್ದರೂ, ಯೇಸು ಯಾರ ಕುಮಾರನೊ ತಿಳಿಯದಿದ್ದರೂ, ಭಗವದ್ಗೀತೆಯಲ್ಲಿ ಕೃಷ್ಣನು ದೇವರೆಂಬುವುದಕ್ಕೆ ಅನುಮಾನ ಇಲ್ಲದ ಆಧಾರಗಳಿವೆ. ಅನುಮಾನದಿಂದ ಕೂಡಿಕೊಂಡ ವಾಕ್ಯಗಳನ್ನು ಕುರುಡರಂತೆ ನಂಬಿದಾಗ. ಅನುಮಾನ ಇಲ್ಲದ ವಾಕ್ಯಗಳನ್ನು ನೇರವಾಗಿ ನೋಡಿ ಏಕೆ ನಂಬಬಾರದೆಂದು ಪ್ರಶ್ನಿಸುತ್ತಿದ್ದೇನೆ. ನಾವು ಕ್ರೈಸ್ತವರು ಎನ್ನುವ ಒಂದೇ ಒಂದು ಉದ್ದೇಶದಿಂದ, ಭಗವದ್ಗೀತೆ ಹಿಂದೂಗಳದು ಎನ್ನುವ ಭಾವದಿಂದ ಇರುವುದರಿಂದ ಕ್ರೈಸ್ತವರು ಶ್ರೀಕೃಷ್ಣನನ್ನು ದೇವರೆಂದು ಒಪ್ಪಿಕೊಳ್ಳದೆ ಹೋಗುತ್ತಿದ್ದಾರೆ. ನಿಮಗೆ ಅರ್ಥವಾಗದ ಬೈಬಲ್‌ನ್ನು ಕೈಯಲ್ಲಿಡಿದು, ಅರ್ಥವಾಗುವುದಕ್ಕೆ ಅವಕಾಶವಿರುವ ಭಗವದ್ಗೀತೆ

ಯನ್ನು ಅಸೂಯೆಯಿಂದ ಕ್ರೈಸ್ತವರು ನೋಡುತ್ತಿರುವುದು ವಾಸ್ತವವಾ ಅಲ್ಲವಾ ನೀವೇ ಹೇಳಿರಿ?

**ಉತ್ತರ :–** ನಮಗೆ ಅರ್ಥವಾಗಲಿ ಅರ್ಥವಾಗದಿರಲಿ ನಮ್ಮ ಗ್ರಂಥ ನಮಗೆ ದೊಡ್ಡದು. ಇತರರ ಗ್ರಂಥವನ್ನು (ಭಗವದ್ಗೀತೆಯನ್ನು) ಒಪ್ಪಿಕೊಂಡರೆ ನಮ್ಮ ದೇವರನ್ನು ಅಲ್ಲವೆಂದು ಬೇರೇ ದೇವರ ಹಿಂದೆ ಬಿದ್ದಂತಾಗುತ್ತದೆ. ಆಗ ಪ್ರಭುವು ನಮ್ಮನ್ನು ಕ್ಷಮಿಸುವುದಿಲ್ಲ. ಆದ್ದರಿಂದ ಭಗವದ್ಗೀತೆಯನ್ನು ನಾವು ಒಪ್ಪಿಕೊಳ್ಳುವುದಿಲ್ಲ.

**ನನ್ನ ಪ್ರಶ್ನೆ :–** ಭಗವದ್ಗೀತೆಯನ್ನು ಓದಬಾರದೆಂದಾಗಲಿ, ಇತರ ಗ್ರಂಥಗಳನ್ನು ಓದಿದರೆ ಬೇರೇ ದೇವರ ಹಿಂದೆ ಬಿದ್ದಂತಾಗಲಿ, ಹಾಗೆ ಓದಿದವನನ್ನು ಕ್ಷಮಿಸುವುದಿಲ್ಲವೆಂದು ಹೇಳಿದಂತಾಗಲಿ, ಬೈಬಲ್ ಗ್ರಂಥದಲ್ಲಿ ಎಲ್ಲಿಯಾದರೂ ಇದೆಯಾ? ಹೇಳಿರಿ.

**ಉತ್ತರ :–** ನಮ್ಮ ಹಿರಿಯರು ಹೇಳಿದ ಹಾಗೆ, ನಮ್ಮ ಗ್ರಂಥಗಳಲ್ಲಿ ಇದ್ದಂತೆ ದೇವರನ್ನು ಹೊರತು ಇತರರನ್ನು ನಂಬುವುದಿಲ್ಲ. ಆದ್ದರಿಂದ ಗೀತೆಯನ್ನಾಗಲಿ, ಕೃಷ್ಣನನ್ನಾಗಲಿ ನಾವು ನಂಬುವುದಿಲ್ಲ.

**ನನ್ನ ಪ್ರಶ್ನೆ :–** ದೇವರನ್ನು ಹೊರತು ಇತರರನ್ನು ನಂಬಬೇಡವೆಂಬ ಮಾತನ್ನು ನಾವೂ ಸಹಾ ಒಪ್ಪಿಕೊಳ್ಳುತ್ತೇವೆ. ಆ ಮಾತನ್ನು ಯಾರಾದರೂ ಒಪ್ಪಿಕೊಳ್ಳ ಬೇಕಾಗಿದ್ದೇ. ನಾನು ದೇವರ ಕುಮಾರನು ಎಂದು ಹೇಳಿದ ಯೇಸು ಮಾತನ್ನು ನಂಬಿದಾಗ ನಾನೇ ದೇವರೆಂದು ಹೇಳಿದ ಅವನ ಮಾತನ್ನು ಏಕೆ ನಂಬಬಾರ ದೆಂದು ಕೇಳುತ್ತಿದ್ದೇನೆ. ದೇವರನ್ನು ಹೊರತು ಇತರರನ್ನು ನಂಬುವುದಿಲ್ಲ ಎನ್ನುವ ಮಾತಿನ ಪ್ರಕಾರ ದೇವರು ಅಲ್ಲದಿರುವವರನ್ನು ನಂಬದಿದ್ದರೂ ಫರವಾಗಿಲ್ಲ. ದೇವರೆಂದು ಹೇಳಿಕೊಂಡವನ ಮಾತುಗಳನ್ನು ಸಹ ನಂಬದಿರುವು ದಕ್ಕೆ ಕಾರಣವೇನು?

**ಉತ್ತರಗಳು :–** ಹೇಗೆ ನಂಬಬೇಕು? ಕೃಷ್ಣನ ಜೀವನವನ್ನು ನೋಡಿದರೆ ಆತನು

ದೇವರೆಂದು ನಂಬುವುದಕ್ಕೆ ಅವಕಾಶವೇ ಇಲ್ಲ. ಅಷ್ಟೇ ಅಲ್ಲದೆ ಆತನನ್ನು ದೇವರೆಂಬುವುದಕ್ಕೆ ಯೇಸುವಿನಂತೆ ಯಾರ ಪಾಪಗಳನ್ನು ಕೃಷ್ಣನು ಕ್ಷಮಿಸಲಿಲ್ಲವಲ್ಲ! ನನ್ನಿಂದ ನಿಮಗೆ ಪಾಪಕ್ಷಮಾಪಣೆ ಇದೆಯೆಂದು ಸಹ ಹೇಳಲಿಲ್ಲ. ಯೇಸು ನನ್ನಿಂದ ನಿಮಗೆ ಪಾಪಕ್ಷಮಾಪಣೆ ಇದೆಯೆಂದು ಹೇಳಿದ್ದಾನೆ. ಮಾಡಿ ತೋರಿಸಿದ್ದಾನೆ. ಆದ್ದರಿಂದ ಆತನನ್ನು ದೇವರೆಂದು ನಂಬುತ್ತಿದ್ದೇವೆ.

**ನನ್ನ ಪ್ರಶ್ನೆ :–** ಯೇಸು ನನ್ನಿಂದ ಪಾಪ ಕ್ಷಮಾಪಣೆ ಇದೆಯೆಂದು ಹೇಳಿದ್ದಾನೆ. ಕೃಷ್ಣನು ನನ್ನ ಜ್ಞಾನದಿಂದ ಕರ್ಮನಾಶ ಇದೆಯೆಂದು ಹೇಳಿದ್ದಾನೆ. ಹೇಗೆ ನೋಡಿದರೂ ಇಬ್ಬರ ಮಾತು ಒಂದೇ. ಅವರ ಮಾತಿನ ಪ್ರಕಾರವೇ ನಡೆದಿದೆ. ಪಾಪ ಕ್ಷಮಾಪಣೆ ಎಂದರೂ, ಕರ್ಮನಾಶ ಎಂದರೂ ಎರಡೂ ಒಂದೇ. ಆದ್ದರಿಂದ ಈ ವಿಷಯದಲ್ಲಿ ಸಹ ನೀವು ತಪ್ಪಾಗಿ ಅರ್ಥೈಸಿಕೊಂಡಿದ್ದೀರೆಂದು ತಿಳಿಯುತ್ತಿದೆ. ಇಲ್ಲಿಯವರೆಗು ಎಷ್ಟೋ ವಿಧಗಳಲ್ಲಿ ನಿಮ್ಮನ್ನು ಪ್ರಶ್ನಿಸಿದ್ದೇನೆ. ನನ್ನ ಪ್ರಶ್ನೆಗೆ ನೀವು ಹೇಳುವ ಉತ್ತರಕ್ಕಿಂತ ನಮ್ಮ ಪ್ರಶ್ನೆಯೇ ದೊಡ್ಡದಾಗಿ ಹೇಳಲಾಗಿದೆ. ಎಷ್ಟೋ ವಿವರವಾಗಿ ಪ್ರಶ್ನಿಸಿದರೂ ಕೊನೆಗೆ ನಿಮ್ಮ ಉತ್ತರಗಳು ಸ್ವಮತಾಭಿಮಾನದಿಂದಲೇ ಹೇಳಲ್ಪಟ್ಟಿವೆ. ಸ್ವಂತ ಮತದ ಮೇಲೆ ಪ್ರೇಮ ಅಭಿಮಾನಗಳಿರುವಾಗ ಪಕ್ಕದ ಮತದಲ್ಲಿ ಇರುವುದೆಲ್ಲಾ ಕಡಿಮೆಯಾಗಿಯೇ ಕಾಣಿಸುತ್ತಿರುತ್ತದೆ. ಅದೇ ವಿಧವಾಗಿ ಕ್ರೈಸ್ತವ ಮತದ ಮೇಲೆ ಅಭಿಮಾನ ಇರುವವರಿಗೆಲ್ಲ ಹಿಂದೂಮತದ ಮೇಲೆ ದ್ವೇಷವಿರುತ್ತದೆ. ಮತದ್ವೇಷಗಳಿಂದಲೇ ಭಗವದ್ಗೀತೆಯನ್ನು ಕ್ರೈಸ್ತವರು ಒಪ್ಪಿಕೊಳ್ಳುತ್ತಿಲ್ಲ. ಹಾಗೆಯೇ ಕೃಷ್ಣನನ್ನು ಒಪ್ಪಿಕೊಳ್ಳುತ್ತಿಲ್ಲ. ಬೈಬಲ್ ಗ್ರಂಥದಲ್ಲಿ ಎಲ್ಲಾಗಲಿ ಯೇಸು ತನ್ನದು ಕ್ರೈಸ್ತವ ಮತವೆಂದು ಹೇಳಲಿಲ್ಲ. ಕ್ರೈಸ್ತವ ಮತವನ್ನು ಬೆಳೆಸುವುದಕ್ಕೆ ಇತರ ಮತಗಳನ್ನು ಕಡಿಮೆಮಾಡಿ ಮಾತನಾಡಿ, ಆ ಮತಸ್ಥರನ್ನು ಮೋಸಮಾಡಿ ತಮ್ಮ ಮತದಲ್ಲಿ ಸೇರಿಸಿಕೊಳ್ಳಲು ಸಹ ಹೇಳಲಿಲ್ಲ. ಯೇಸು ಮತಾಂತರ ಮಾಡಿರೆಂದು, ಕ್ರೈಸ್ತವ ಮತವನ್ನು ಅಭಿವೃದ್ಧಿ ಮಾಡಿದವನು ನನ್ನ ಭಕ್ತನಾಗುತ್ತಾನೆಂದು ಎಲ್ಲಿಯೂ ಹೇಳಲಿಲ್ಲ. ಹಾಗಿರುವಾಗ ನೀವು ಹಿಂದೂಮತಸ್ಥರನ್ನು ಕ್ರೈಸ್ತವರನ್ನಾಗಿ

ಮಾರ್ಪಡಿಸುವುದಕ್ಕೆ ಏಕೆ ಪ್ರಯತ್ನಿಸುತ್ತಿದ್ದೀರಾ? ಕ್ರೈಸ್ತವ ಮತದಲ್ಲಿನ ಪ್ರತಿ ಬೋಧಕನು ಕೆರೆಯಲ್ಲಿ ಮೀನುಗಳ ಹಾಗೆ, ಮಳೆಗಾಲದಲ್ಲಿ ಸುಲಭವಾಗಿ ದೊರಕುವ ಹುಳುಗಳ ಆಹಾರದಂತಿರುವ ಹಿಂದೂಗಳಲ್ಲಿನ ಶೂದ್ರರನ್ನು ತಮ್ಮ ಮತದೊಳಗೆ ಬದಲಾಯಿಸಬೇಕೆಂದು ನೋಡುತ್ತಿದ್ದಾರೆ. ಬೈಬಲ್‌ನಲ್ಲಿ ದೇವರು ಹೇಳದ ಕೆಲಸವನ್ನು (ಮತಾಂತರವನ್ನು) ಕ್ರೈಸ್ತವರು ಏಕೆ ಮಾಡುತ್ತಿದ್ದಾರೆಂದು ಕೇಳುತ್ತಿದ್ದೇನೆ. ಪ್ರಸ್ತುತ ಕಾಲದಲ್ಲಿ ದೊಡ್ಡ ಪ್ರಶ್ನೆಯಾಗಿರುವ ಇದಕ್ಕೆ ನೀವು ಉತ್ತರ ಹೇಳಿರಿ.

**ಉತ್ತರ :–** ನಾವು ನಮ್ಮ ಮತವನ್ನು ಅಭಿವೃದ್ಧಿ ಮಾಡುವುದಕ್ಕೆ ಮತಾಂತರ ಮಾಡುತ್ತಿದ್ದೇವೆಂದು, ಹಿಂದೂಗಳನ್ನು ಕ್ರೈಸ್ತರನ್ನಾಗಿ ಮಾರ್ಪಡಿಸುತ್ತಿದ್ದೇವೆ ಎಂದುಕೊಳ್ಳುವುದು ತಪ್ಪು. ನಾವು ಹಾಗೆ ಎಂದಿಗೂ ಮಾಡಲಿಲ್ಲ.

**ನನ್ನ ಪ್ರಶ್ನೆ :–** ಕಳೆದ ಐವತ್ತು ವರ್ಷಗಳಿಂದ ನೋಡಿದರೆ ಮೊದಲು ಶೇಕಡ 90 ರಷ್ಟಿದ್ದ ಹಿಂದೂಗಳು ಈದಿನ ಶೇಕಡ 65 ರಷ್ಟಕ್ಕೆ ಇಳಿದುಹೋಗಿದ್ದಾರೆ. ಇದನ್ನನುಸರಿಸಿ ಐವತ್ತು ವರ್ಷಗಳಲ್ಲಿ ಶೇಕಡ 25ರಷ್ಟು ಹಿಂದೂಗಳು ಕ್ರೈಸ್ತವರಾಗಿ ಬದಲಾಗಿಹೋಗಿದ್ದಾರೆ. ಕ್ರೈಸ್ತವ ಬೋಧಕರು ತಮ್ಮ ಮತವನ್ನು ಪ್ರಚಾರ ಮಾಡಿ, ನಮ್ಮ ಮತದಲ್ಲಿ ಪಾಪ ಕ್ಷಮಾಪಣೆ ಇದೆಯೆಂದು, ನೀವು ಮಾಡಿಕೊಂಡ ಪಾಪಗಳೆಲ್ಲ ನಮ್ಮ ಮತದೊಳಗೆ ಬಂದರೆ ಹೋಗುತ್ತವೆಂದು, ಅನೇಕ ವಿಧಗಳ ಆಸೆಗಳನ್ನು ಕಲ್ಪಿಸಿರುವುದರಿಂದ, ಕೆರೆಯಲ್ಲಿನ ಮೀನುಗಳು ಮತ್ಸ್ಯಕಾರರ ಬಲೆಯಲ್ಲಿ ಸಿಲುಕಿಕೊಂಡ ಹಾಗೆ ಮೀನುಗಳಂತಿರುವ ಹಿಂದೂಗಳು ಕ್ರೈಸ್ತರ ಬೋಧನೆಗಳು ಎಂಬ ಬಲೆಯಲ್ಲಿ ಸಿಲುಕಿಕೊಂಡು, ಕೊನೆಗೆ ಕ್ರೈಸ್ತವ ಮತ ಎನ್ನುವ ಬುಟ್ಟಿಯೊಳಗೆ ಸೇರಿಸಲ್ಪಟ್ಟು ಕ್ರೈಸ್ತವರಾಗಿದ್ದಾರೆ. ಈ ವಿಧವಾಗಿ ನೀವು ಹಿಂದೂಗಳನ್ನು ಕ್ರೈಸ್ತವರನ್ನಾಗಿ ಮಾರ್ಪಡಿಸಲಿಲ್ಲವೇನೊ ಹೇಳಿರಿ. ಕಳೆದ ಐವತ್ತು ವರ್ಷಗಳ ಕೆಳಗೆ ಶೇ. 90ರಷ್ಟಿದ್ದ ಹಿಂದೂಗಳು ಶೇ.25ರಷ್ಟು ಕ್ರೈಸವರಾಗಿ ಏಕೆ ಬದಲಾಗಿದ್ದಾರೆ ಹೇಳಿರಿ?

**ಉತ್ತರ :–** ಹಿಂದೂಗಳು ಕ್ರೈಸ್ತವರಾಗಿ ಬದಲಾದ ಮಾತು ನಿಜವೇ ಆದರೆ, ನಾವು ಅವರನ್ನು ಕ್ರೈಸ್ತವರಾಗಿ ಬದಲಾಗಿರೆಂದು ಹೇಳಲಿಲ್ಲ. ಹಿಂದೂಮತದಲ್ಲಿ ಆದರಣೆಯಿಲ್ಲದವರು, ಅಗ್ರಕುಲಗಳ ಕೆಳಗೆ ವೇದನೆ ಹೊಂದುತ್ತಿರುವವರು, ಅಗ್ರಕುಲದವರು ಶೂದ್ರರನ್ನು ಅಂಟಬಾರದವರಾಗಿ ನೀಚವಾಗಿ ನೋಡುವುದರಿಂದ, ಬಹಳಜನರಿಗೆ ದೇವಾಲಯಗಳ ಪ್ರವೇಶ ಇಲ್ಲದಿರುವುದರಿಂದ, ಹಿಂದೂಮತದಲ್ಲಿ ಏಕೆ ಹುಟ್ಟಿದ್ದೇವೆಂದು ದುಃಖಪಡುವವರಿಗೆಲ್ಲ ನಮ್ಮ ಮತ ಚೆನ್ನಾಗಿ ಕಾಣಿಸಿದೆ. ಹಿಂದೂ ಮತದಲ್ಲಿ ಎಂದೂ ಜ್ಞಾನಬೋಧನೆ ಕೇಳುವುದಕ್ಕೆ ಇಷ್ಟಪಡದ ಹಿಂದೂಗಳಿಗೆ ನಮ್ಮ ಕ್ರೈಸ್ತವ ಮತದಲ್ಲಿನ ಬೋಧನೆಗಳು ಚೆನ್ನಾಗಿ ಕಾಣಿಸಿವೆ. ದೇವಾಲಯಗಳೊಳಗೆ ಪ್ರವೇಶ ಇಲ್ಲದವರಿಗೆ ನಮ್ಮ ಚರ್ಚಿಯಲ್ಲಿ ಎಂತಹ ಆಕಾಂಕ್ಷೆಗಳು ಇಲ್ಲದಂತೆ, ಎಲ್ಲರಿಗೂ ಪ್ರವೇಶವಿರುವುದು ಚೆನ್ನಾಗಿ ಕಾಣಿಸಿದೆ. ಈ ವಿಧವಾಗಿ ಎಷ್ಟೋ ಲೋಪಗಳು ಹಿಂದೂಮತದಲ್ಲಿ ಇರುವುದರಿಂದ, ಆ ಲೋಪಗಳೆಲ್ಲ ಇಲ್ಲದ ನಮ್ಮ ಮತದೊಳಗೆ ಎದುರು ಪ್ರವಾಹಕ್ಕೆ ಮೀನುಗಳು ಬಂದಂತೆ ಬಂದಿದ್ದಾರೆ. ಇಂದಿಗೂ ಎಷ್ಟೋ ಜನ ಹಿಂದೂಗಳು ಕ್ರೈಸ್ತವ ಮತದೊಳಗೆ ಬರಬೇಕೆಂದು ನೋಡುತ್ತಿದ್ದಾರೆ. ನಿಮ್ಮ ಮತದಲ್ಲಿ ಅಗ್ರಕುಲಗಳ ದೊಡ್ಡಸ್ತಿಕೆಯೆಂಬ ಚಳಿಗೆ ಸಹಿಸಿಕೊಳ್ಳದವರೆಲ್ಲರೂ ಬೆಚ್ಚಗೆ ಇರುತ್ತದೆಂದು ಕ್ರೈಸ್ತಮತ ಎನ್ನುವ ಕೋಟಿನೊಳಗೆ ತೂರಿಕೊಳ್ಳಬೇಕೆಂದು ನೋಡುತ್ತಿದ್ದಾರೆ. ಹಿಂದೂ ಮತದಲ್ಲಿ ಕೆಲವು ಪದ್ಧತಿಗಳು ಬದಲಾಗುವವರೆಗು ಶೂದ್ರರಾಗಿರುವ ಎಲ್ಲಾ ಕುಲದವರೂ ನಮ್ಮ ಮತದಕಡೆ ನೋಡುತ್ತಲೇ ಇರುತ್ತಾರೆ. ಮತ ಬದಲಾಯಿಸಬೇಕೆಂದು ಪ್ರಯತ್ನ ಮಾಡುತ್ತಲೇ ಇರುತ್ತಾರೆ.

**ನನ್ನ ಪ್ರಶ್ನೆ :–** ನೀವು ಹೇಳಿದ ಹಾಗೆ ಹಿಂದೂಗಳಲ್ಲಿ ಅಗ್ರಕುಲದವರಿರುವುದು ನಿಜವೇ. ಆದರೂ ಶೂದ್ರರನ್ನು ತೊಂದರೆ ಕೊಡುವಷ್ಟು ಅವರು ಏನೂ ಪ್ರವರ್ತಿಸಲಿಲ್ಲವೆ! ಕೆಲವು ಸಂಪ್ರದಾಯಗಳ ಪ್ರಕಾರ ಅವರು ನಡೆದುಕೊಳ್ಳುವುದು ವಾಸ್ತವವೇ. ಅಷ್ಟು ಮಾತ್ರಕ್ಕೆ ಉಳಿದ ಹಿಂದೂಗಳು ಮತ ಬದಲಾಯಿಸಿಕೊಳ್ಳುವಂತಹ ಪರಿಸ್ಥಿತಿ ಏನು ಇಲ್ಲವಲ್ಲವೆ!

**ಉತ್ತರ :–** ಇಲ್ಲಿಯವರೆಗು ನೀತಿಯಾಗಿ, ನ್ಯಾಯಬದ್ಧವಾಗಿ ನಮ್ಮ ಮಧ್ಯ ಸಂವಾದ ಸಾಗುತ್ತಿದೆ. ನೀವು ಕೇಳಬೇಕಾಗಿರುವುದನ್ನು ಬಿಡದಹಾಗೆ ಕೇಳಿದ್ದೀರ. ನೀವು ಅಂದಹಾಗೆ ನಮ್ಮ ಮತದ ಮೇಲೆ ನಮಗೆ ಅಭಿಮಾನ ಗೌರವ ಇರುವುದು ನಿಜವೇ. ನಮ್ಮ ತಪ್ಪನ್ನು ನಾವು ಒಪ್ಪಿಕೊಳ್ಳುತ್ತಿದ್ದೇವೆ. ಅಂತಹದರಲ್ಲಿ ನಿಮ್ಮಲೋಪಗಳನ್ನು ನೀವೂ ಸಹ ಒಪ್ಪಿಕೊಳ್ಳಬಹುದಲ್ಲವೆ! ಇರುವುದು ಇದ್ದಂತೆ ಬಚ್ಚಿಟ್ಟುಕೊಳ್ಳದೆ (Open heart ಆಗಿ) ಮಾತನಾಡಿರಿ. ನೀವು ಸಮಾಜದಲ್ಲಿ ಒಬ್ಬ ಯೋಗಿಯಾಗಿದ್ದೂ, ಸ್ವಚ್ಛವಾದ ಭಗವದ್ಗೀತಾ ಜ್ಞಾನವನ್ನು ಹಿಂದೂ ಮತದಲ್ಲಿ ಬೋಧಿಸುತ್ತಿದ್ದೀರ. ಎಷ್ಟೋ ಸಂಚಲನವಾದ ಜ್ಞಾನವಿಷಯಗಳನ್ನು ಐವತ್ತು ಗ್ರಂಥಗಳಾಗಿ ಬರೆದಿದ್ದೀರ. ಹಿಂದೂ ಮತದಲ್ಲಿ ಎಷ್ಟೋ ಜನ ಅಭಿಮಾನಿಸುವ ಗುರುವಾಗಿ ಇದ್ದೀರ. ನೀವು ಹೇಳುವ ಪ್ರತಿಯೊಂದು ಭಗವದ್ಗೀತೆಯನ್ನು ಆಧಾರ ಮಾಡಿಕೊಂಡು ಹೇಳುವ ಜ್ಞಾನವೇ. ಇಂತಹ ದೊಡ್ಡ ಜ್ಞಾನವನ್ನು ನಿಮ್ಮನ್ನು ಹಿಂದೂಮತದಲ್ಲಿ ಎಷ್ಟೋ ದೊಡ್ಡ ವ್ಯಕ್ತಿಯಾಗಿ ಕ್ರೈಸ್ತವರಾದ ನಾವು ಗುರುತಿಸಿದ್ದೇವೆ. ಆದರೆ ಹಿಂದೂಮತದಲ್ಲಿ ಅಗ್ರವರ್ಣದವರು ನಿಮ್ಮನ್ನು ಎಷ್ಟೋ ಸಲ ವಿರೋಧಿಸಿದ್ದಾರೆ. ನಿಮ್ಮನ್ನು ಪರಮತ ಬೋಧನೆಯನ್ನು ಪ್ರಚಾರ ಮಾಡುತ್ತಿದ್ದೀರ ಅನ್ನಲಿಲ್ಲವಾ? ಸ್ವಲ್ಪವೂ ದೈವಜ್ಞಾನ ತಿಳಿಯದ ಹಿಂದೂ ಧರ್ಮರಕ್ಷಕರೆಂಬುವವರನ್ನು, ಹಿಂದಿನಿಂದ ಪ್ರೇರೇಪಿಸಿ ನಿಮ್ಮ ಮೇಲೆ ದಾಳಿಮಾಡುವುದಕ್ಕೆ ಪ್ರಯತ್ನಿಸಲಿಲ್ಲವಾ? ಹಿಂದೂಮತಕ್ಕೆ ನಾವೇ ದೊಡ್ಡವರೆಂದು, ನಾವೇ ಹಿಂದೂ ಸಂಪ್ರದಾಯಗಳನ್ನು ಕಾಪಾಡುವವರೆಂದು ಹೇಳಿ ಹಿಂದೂ ಧರ್ಮರಕ್ಷಣೆ, ಪರಿರಕ್ಷಣೆ, ಎಂಬ ಹೆಸರಿನಿಂದ ಸಂಘಗಳನ್ನು ಸ್ಥಾಪಿಸಿ, ಅದರಲ್ಲಿ ಮತಾಭಿಮಾನವಿರುವ ಹಿಂದೂಗಳಲ್ಲಿ ಶೂದ್ರರನ್ನೇ ಸಭ್ಯರನ್ನಾಗಿ ಸೇರಿಸಿ, ಶೂದ್ರರ ಬೆರಳಿಂದ ಶೂದ್ರರ ಕಣ್ಣನ್ನೇ ಇರಿಯಬೇಕೆಂದು ಅಗ್ರವರ್ಣಗಳ ಹಿಂದೂಗಳು ಪ್ರಯತ್ನಿಸುತ್ತಿಲ್ಲವಾ? ಚೌದರಿ ಕುಲದಲ್ಲಿ ಹುಟ್ಟಿದ ನೀವು ಎಷ್ಟೋ ದೊಡ್ಡ ಯೋಗಿಯಾಗಿ, ಸಂಪೂರ್ಣ ಜ್ಞಾನ ತಿಳಿದ ವ್ಯಕ್ತಿಯಾಗಿರುವ ನಿಮ್ಮನ್ನು ಅನಂತಪುರಂ ಜಿಲ್ಲೆ ಗುಂತಕಲ್ಲಿನಲ್ಲಿ ಹಿಂದೂಧರ್ಮರಕ್ಷಣೆಯ (ವಿಶ್ವಹಿಂದೂ ಪರಿಷತ್‌ನ)ಲ್ಲಿರುವ ಶೂದ್ರರಿಂದಲೇ ಅವಮಾನಮಾಡುವುದಕ್ಕೆ ಪ್ರಯತ್ನಿ

ಸಲಿಲ್ಲವಾ? ಹಿಂದೂಜಾತಿಗೆ ಆದರ್ಶ ಗ್ರಂಥವಾದ ನೀವು ಬರೆದ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ನಿಮ್ಮ ಮುಂದೆಯೇ ಬೆಂಕಿ ಇಟ್ಟು ಸುಡಲಿಲ್ಲವಾ? ಆ ದಿನ ನಿಮ್ಮನ್ನು ಅವಮಾನಮಾಡಿರುವುದು ಒಂದು ರೆಡ್ಡಿ ಮತ್ತು ಚೌದರಿ ಕುಲಸ್ಥರಲ್ಲದೆ ಉಳಿದ ಇಪ್ಪತ್ತು ಮಂದಿ ಶೂದ್ರರೇ ಅಲ್ಲವೆ! ಸ್ವಲ್ಪವೂ ಜ್ಞಾನ ತಿಳಿಯದವರನ್ನು ಹಿಂದೆ ಪ್ರೇರೇಪಿಸಿರುವುದು ಅಗ್ರಕುಲದವರಾದ ಸ್ವಾಮಿಗಳೆಂದು ನಿಮಗೆ ತಿಳಿಯದಾ? ನಿಮಗೆ ಅವರಿಂದ ದುಃಖವಾಗಲಿಲ್ಲವಾ? ಅವರ ಬೆರಳು ತೆಗೆದು ಅವರ ಕಣ್ಣುಗಳೇ ಇರಿದಂತೆ ನಿಮ್ಮವರೇ ನಿಮ್ಮನ್ನು ಆತಂಕ ಪಡಿಸಲಿಲ್ಲವಾ? ಈ ದಿನ ಕ್ರೈಸ್ತ ಮತವನ್ನು ಏಕೆ ಮತಾಂತರ ಮಾಡುತ್ತಿದ್ದಾರೆಂದು, ಹಿಂದೂಗಳನ್ನು ಐವತ್ತು ವರ್ಷಗಳಲ್ಲಿ ಶೇ.25ರಷ್ಟು ಕ್ರೈಸ್ತವರಾಗಿ ಬದಲಾಯಿಸಿದ್ದಾರೆಂದು, ಆ ವಿಧವಾಗಿ ಮತ ಬದಲಾವಣೆ ಮಾಡಿ ಹಿಂದೂಗಳನ್ನು ಕ್ರೈಸ್ತವರಾಗಿ ಮಾರ್ಪಡಿಸುವುದು ಕ್ರೈಸ್ತವರ ತಪ್ಪಾಗಿ, ಇಲ್ಲಿಯವರೆಗು ನಮ್ಮೊಂದಿಗೆ ವಾದಿಸಿದ ನಿಮ್ಮನ್ನು ಅವಮಾನಮಾಡುವುದಕ್ಕೆ, ಯಾರೋ ಪ್ರಚುರಿಸಿದ ಕ್ರೈಸ್ತವ ಪ್ರಚಾರ ಕಾಗದವನ್ನು ನೀವೇ ಪ್ರಚರಿಸಿದ್ದೀರೆಂದು ಅಸತ್ಯ ಆರೋಪಣೆ ಮಾಡಿ, ನಿಮ್ಮ ಪ್ರೆಸ್‌ನಲ್ಲಿ ಕೆಲಸ ಮಾಡುವ ಭಾಸ್ಕರ್‌ರೆಡ್ಡಿಯನ್ನು ವಿಪರೀತವಾಗಿ ಹೊಡೆಯಲಿಲ್ಲವಾ? ಆ ಪ್ರಚಾರ ಕಾಗದದಲ್ಲಿ ಯಾರು ಪ್ರಚುರಿಸುವುದೆಂದು ಅಡ್ರಸ್ ಇದ್ದರೂ, ನೀವು ಅಲ್ಲವೆಂದು ತಿಳಿದರೂ, ಅದೇ ಕೆಲಸವಾಗಿ ದಾಳಿಮಾಡಬೇಕೆಂದು ಆ ದಿನ ಬಂದಿರುವವರೆಲ್ಲರೂ ಶೂದ್ರರೇ ಅಲ್ಲವೆ! ನಿಮ್ಮ ಅನುಚರರು ಹತ್ತು ಜನರಾದರೂ ಇರುತ್ತಾರೆಂದು ಅವರನ್ನು ಹೊಡೆದು ಅವಮಾನ ಮಾಡಬೇಕೆಂದು ಬಂದಿರುವ ಇಪ್ಪತ್ತೈದು ಜನ ಶೂದ್ರರಿಗೆ ನಾಯಕನು ಧೀರಜ್‌ರೆಡ್ಡಿ ಸಹ ಒಬ್ಬ ಶೂದ್ರನೇ ಅಲ್ಲವೆ! ಧೀರಜ್‌ರೆಡ್ಡಿ ಒಂಟಿಯಾಗಿರುವ ಭಾಸ್ಕರ್‌ರೆಡ್ಡಿಯನ್ನು ಹೊಡೆದುಹೋಗಿದ್ದಾನೆ. ಒಬ್ಬ ರೆಡ್ಡಿ ಮತ್ತೊಬ್ಬ ರೆಡ್ಡಿಯನ್ನು ಕ್ರೈಸ್ತವನೆಂದು ಆರೋಪಣೆ ಮಾಡಿ ದಾಳಿಮಾಡಿದರೆ ಯಾರ ಬೆರಳಿಂದ ಯಾರ ಕಣ್ಣನ್ನು ಇರಿದಿದ್ದಾರೊ ನೀವೇ ಚೆನ್ನಾಗಿ ಆಲೋಚಿಸಿಕೊಳ್ಳಿ. ಇದೆಲ್ಲವೂ ಗಮನಿಸಿದರೆ ಇಂದಿಗೂ ಅಗ್ರಕುಲದವರು ತಿಳುವಳಿಕೆಯಿಂದ ಪ್ರವರ್ತಿಸುತ್ತಾ, ಉಳಿದ ಹಿಂದೂಗಳನ್ನು ಕ್ರೈಸ್ತವರಾಗಿ ಬದಲಾಗದಂತೆ ಹಿಂದೂ ಧರ್ಮರಕ್ಷಣ

ಸಂಘಗಳನ್ನು ಏರ್ಪಾಟು ಮಾಡಿ, ಆ ಸಂಘಗಳನ್ನು ಇಷ್ಟಬಂದಂತೆ ಬಳಸಿಕೊಳ್ಳುತ್ತಾ, ಅವರಿಗಿಂತ ಯಾವ ಹಿಂದೂ (ಯಾವ ಶೂದ್ರನು) ಮೇಲಕ್ಕೆ ಬರಬಾರದೆಂಬ ಉದ್ದೇಶದಿಂದಲೇ ನಿಮ್ಮನ್ನು ನೋಡಿ ಅಸೂಯೆಪಟ್ಟ ಅಗ್ರಕುಲದವರು, ಶೂದ್ರರಿಂದಲೇ ದಾಳಿಗಳನ್ನು ಮಾಡಿಸಿದ್ದಾರಲ್ಲವೆ!

ಆ ದಿನ ಹಿಂದೂಗಳಾದ ನಿಮ್ಮ ಮೇಲೆ ಅನೇಕ ಸಲ ಹಿಂದೂಗಳಿಂದಲೆ ದಾಳಿಯನ್ನು ಮಾಡಿಸಿರುವುದು, ಹಿಂದೆ ಇದ್ದು ಪ್ರೇರೇಪಿಸಿರುವುದು ಹಿಂದೂಗಳಲ್ಲಿನ ಅಗ್ರಕುಲವರ್ಣದವರೇ ಎಂದು ನಿಮಗೂ ಸಹ ತಿಳಿದಿದೆ. ಆ ಸಂಘಟನೆಗಳಿಂದ ಮಾನಸಿಕವಾಗಿ ಬಾಧೆಪಟ್ಟ ನಿಮ್ಮ ಶಿಷ್ಯರು ಸುಮಾರು 500 ಜನ ಒಂದಾಗಿ ಇಸ್ಲಾಮ್ ಮತದೊಳಗೆ ಹೋಗುತ್ತೇವೆಂದು ಹೈದರಾಬಾದ್‌ನಲ್ಲಿನ ಬಷೀರ್‌ಬಾಗ್ ಪ್ರೆಸ್‌ಕ್ಲಬ್‌ನಲ್ಲಿ ವರದಿಗಾರರೊಂದಿಗೆ ಮೀಟಿಂಗ್‌ನಲ್ಲಿ ಹೇಳಲಿಲ್ಲವಾ? ವಿಷಯ ತಿಳಿದ ನೀವು ಯಾರೋ ತಿಳುವಳಿಕೆಯಿಲ್ಲದ ಕೆಲಸ ಮಾಡಿದರೆ ನಾವು ಮತ ಬದಲಾಯಿಸುವುದು ಅಜ್ಞಾನವಾಗುತ್ತದೆಂದು ಸರಿಪಡಿಸಿ ಹೇಳಿ ಎಲ್ಲರನ್ನು ನಿವಾರಿಸಲಿಲ್ಲವಾ? ಈಗಲೂ ಹಿಂದೂ ಧರ್ಮರಕ್ಷಣೆ ಎಂಬ ಹೆಸರಿನಿಂದ ಅಗ್ರಕುಲದವರು ತಮ್ಮ ದೊಡ್ಡಸ್ತಿಕೆಯನ್ನು ಚೆಲಾಯಿಸುತ್ತಾ ಅಕ್ರಮಗಳು ಮಾಡುತ್ತಿಲ್ಲವಾ? ಜ್ಞಾನವನ್ನು ಹೇಳಿ ಹಿಂದೂಮತವನ್ನು ಉದ್ಧರಿಸುವ ನಿಮ್ಮನ್ನು ನಿಮ್ಮ ಶಿಷ್ಯರನ್ನು ಹಿಂಸಿಸುವುದು ಅಕ್ರಮ ಅಲ್ಲವೆ! ನೀವೇ ಹೇಳಿರಿ. ಜಾತೀಯ ಗಾಯಕನಾದ ಜೇಸುದಾಸು ಭಕ್ತಿಹಾಡುಗಳಲ್ಲಿ ಹೆಸರುವಾಸಿಯಾದ ವ್ಯಕ್ತಿ ಆದರೂ, ಆತನು ಎಷ್ಟೋ ಭಕ್ತಿಯಿಂದ ಏಳುಬೆಟ್ಟಗಳ ವೆಂಕಟೇಶ್ವರನನ್ನು ದರ್ಶಿಸಿಕೊಳ್ಳಬೇಕೆಂದು ತಿರುಮಲಗೆ ಬಂದರೆ ಆತನು ಕ್ರೈಸ್ತವನೆಂದು ಆಲಯದೊಳಗೆ ಪ್ರವೇಶಿಸದಂತೆ ಹಿಂದಕ್ಕೆ ಕಳಿಸಿದಹಾಗೆ ಜೇಸುದಾಸೇ ಒಂದು ಟಿವಿ ಛಾನಲ್‌ನಲ್ಲಿ ಬಾಧೆಪಟ್ಟು ಹೇಳಿಕೊಳ್ಳುವುದು ಅಸತ್ಯವಾ? ಇಷ್ಟು ಅಡೆತಡೆಗಳು ನಡೆಯುತ್ತಿದ್ದರೂ ಹಿಂದೂಮತವನ್ನು ಏನೂ ಅನ್ನದಂತೆ, ಹಿಂದೂಗಳು ಕ್ರೈಸ್ತವರಾಗಿ ಬದಲಾಗುವುದಕ್ಕೆ ತಪ್ಪೆಲ್ಲಾ ನಿಮ್ಮದೇ ಎಂದು ನಮ್ಮನ್ನು (ಕ್ರೈಸ್ತರನ್ನು) ದೂಷಿಸುವುದು ನ್ಯಾಯವೇನಾ ನೀವೇ ಹೇಳಿರಿ. ಹಿಂದೂ ಮತದಲ್ಲಿ ಅಗ್ರವರ್ಣಗಳ

ಹಿಂದೂಗಳು ಪ್ರೇರೇಪಿಸಿದರೆ ಉಳಿದ ಹಿಂದೂಗಳು ನಿಮ್ಮನ್ನು ಬಾಧೆ ಇಡಲಿಲ್ಲವಾ? ಹಿಂದೂಮತದಲ್ಲಿ ಎಷ್ಟೋ ದೊಡ್ಡ ಜ್ಞಾನಿಗಳಾದ ನಿಮಗೆ ಸರಿಹೋಗುವ ಸ್ಥಾನವಿದೆಯಾ? ಯಾವ ಒಬ್ಬ ಸ್ವಾಮೀಜೀ ಯಾದರೂ ನಿಮ್ಮೊಂದಿಗೆ ಏಕೀಭವಿಸಿ ಮಾತನಾಡುತ್ತಿದ್ದಾನಾ? ನೀವೇ ಹೇಳಿರಿ!

**ನನ್ನ ಪ್ರಶ್ನೆ :–** ನೀವು ಕೇಳಿರುವವೆಲ್ಲ ಸತ್ಯಗಳೇ. ನೀವು ಮತದ ಕಡೆಯಿಂದ ಮಾತನಾಡುತ್ತಿದ್ದೀರ. ಆದ್ದರಿಂದ ಹಿಂದೂಮತದಲ್ಲಿನ ತಪ್ಪುಗಳು ನಿಮಗೆ ಕಾಣಿಸುತ್ತಿರಬಹುದು. ಆದರೂ ನಾನು ಮತದಕಡೆಯಿಂದ ಮಾತನಾಡುತ್ತಿಲ್ಲ. ದೈವಿಕವಾಗಿ ದೇವರಕಡೆಯಿಂದ ಮಾತನಾಡುತ್ತಿದ್ದೇನೆ. ಭಗವದ್ಗೀತೆಯಲ್ಲಿಯೂ, ಬೈಬಲ್ ಗ್ರಂಥದಲ್ಲಿಯೂ ಇರುವ ಜ್ಞಾನವನ್ನು ಆಧಾರ ಮಾಡಿಕೊಂಡು ಮಾತನಾಡುತ್ತಿದ್ದೇನೆ. ಮತ ದೊಡ್ಡ ಮಾಯೆ ಎಂದು ನಾವು ಮೊದಲೇ ಹೇಳಿದ್ದೇವೆ. ನಾನು ದೈವ ಗ್ರಂಥಗಳನ್ನು ನೋಡಿ, ಅದರಲ್ಲಿನ ಜ್ಞಾನವನ್ನು ಅನುಸರಿಸಿ ಮತಾಂತರ ಒಳ್ಳೆಯದಲ್ಲವೆಂದು ಹೇಳುತ್ತಿದ್ದೇನೆ. ನೀವೂ ಸಹ ನಿಮ್ಮ ಮತದಕಡೆಯಿಂದಲೇ ಕೆಲಸ ಮಾಡುತ್ತಿದ್ದೀರ ಹೊರತು ದೇವರಕಡೆಯಿಂದ ಕೆಲಸ ಮಾಡುತ್ತಿಲ್ಲ. ನಿಮ್ಮ ಬೈಬಲ್ ಗ್ರಂಥದಿಂದ ನೀವು ಶೇಕಡ ಎಷ್ಟು ಅರ್ಥಮಾಡಿಕೊಂಡಿದ್ದೀರೊ, ಏನೆಂದು ಅರ್ಥಮಾಡಿಕೊಂಡಿದ್ದೀರೊ ಹಾಗೆ ಪ್ರವರ್ತಿಸುತ್ತಿದ್ದೀರ. ನೀವು ಮಾಡುತ್ತಿರುವ ಕೆಲಸವನ್ನನುಸರಿಸಿ ನೋಡಿದರೆ ಬೈಬಲ್ ಗ್ರಂಥದಲ್ಲಿ ಪ್ರತ್ಯೇಕಿಸಿ ಏಸು ಹೇಳಿದ ನಾಲ್ಕು ಸುವಾರ್ತೆಗಳಲ್ಲಿನ ಜ್ಞಾನ ಅರ್ಥವಾಗಲಿಲ್ಲವೆಂದು ನಮಗೆ ತಿಳಿಯುತ್ತದೆ. ನಮ್ಮ ಬೈಬಲ್‌ನಲ್ಲಿನ ಜ್ಞಾನ ಹಿಂದೂವಾದ ನಿಮಗೆ ಹೇಗೆ ತಿಳಿಯುತ್ತದೆಂದು ಪ್ರಶ್ನೆ ಬರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಮ್ಮ ಭಗವದ್ಗೀತೆಯಲ್ಲಿರುವುದೇ ಯೇಸು ಹೇಳಿದ ನಾಲ್ಕು ಸುವಾರ್ತೆಗಳಲ್ಲಿ ಇದೆ. ಆದ್ದರಿಂದ ನನಗೆ ಭಗವದ್ಗಗೀತೆ ಹೇಗೆ ತಿಳಿದಿದೆಯೊ ಹಾಗೆಯೇ ಬೈಬಲ್ ಸಹ ತಿಳಿದಿದೆ.

ವಾಸ್ತವವಾಗಿ ಇರುವುದು ಇದ್ದಂತೆ ಹೇಳಿದರೆ ಹಿಂದೂಗಳಿಗೆ ಭಗವದ್ಗೀತೆ ಸ್ವಲ್ಪವೂ ಅರ್ಥವಾಗಲಿಲ್ಲ. ಹಾಗೆಯೇ ಬೈಬಲ್ ಸಹ ಕ್ರೈಸ್ತವರಿಗೆ

ಅರ್ಥವಾಗಲಿಲ್ಲವೆಂದೇ ಹೇಳುತ್ತಿದ್ದೇವೆ. ಭಗವದ್ಗೀತೆ ಹಿಂದೂಗಳಿಗೆ ಅರ್ಥವಾದಂತೆಯೇ ಇದ್ದರೂ ಅದರಲ್ಲಿನ ಮೂರು ಆತ್ಮಗಳ ವಿಷಯ ಭಗವದ್ಗೀತೆಯನ್ನು ಅನುವಾದಿಸಿ ಬರೆದ ದೊಡ್ಡ ಸ್ವಾಮೀಜಿಗಳಿಗೆ ಸಹ ತಿಳಿಯದಂತೆ ಹೋಗಿದೆ. ಅವರಿಗೆ ಅರ್ಥವಾಗಲಿಲ್ಲ ಎಂಬ ವಿಷಯ ಅವರು ಬರೆದ ವಿಧಾನವನ್ನನುಸರಿಸಿಯೇ ತಿಳಿದುಹೋಗುತ್ತಿದೆ. ಭಗವದ್ಗೀತೆ ಮೂರು ಆತ್ಮಗಳ ತ್ರೈತ ಸಿದ್ಧಾಂತದಿಂದ ಕೂಡಿಕೊಂಡ ವಿಷಯ ಹಿಂದೂಗಳಾದವರಿಗೆ ಹೇಗೆ ತಿಳಿಯದಂತೆ ಹೋಗಿದೆಯೋ, ಹಾಗೆಯೇ ಕ್ರೈಸ್ತವರಿಗೂ ಸಹ ಬೈಬಲ್‌ನಲ್ಲಿನ ಸಾರಾಂಶವಾಗಲಿ, ಮೂಲ ಸೂತ್ರಗಳಾಗಲಿ ಸ್ವಲ್ಪವೂ ಅರ್ಥವಾಗಲಿಲ್ಲವೆಂದು ಹೇಳಬಹುದು. ಈ ದಿನ ಕ್ರೈಸ್ತವ ಬೋಧಕರು ಬೋಧಿಸುವ ವಿಧಾನವಾಗಲಿ, ಜ್ಞಾನವಾಗಲಿ ಬೈಬಲ್‌ನಲ್ಲಿನ ಸಾರಾಂಶಕ್ಕೆ ವಿಭಿನ್ನವಾಗಿದೆ. ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 28ನೇ ಅಧ್ಯಾಯದಲ್ಲಿ 19ನೇ ವಾಕ್ಯದಲ್ಲಿರುವ ತಂದೆ ಯಾರೋ, ಕುಮಾರನು ಯಾರೋ, ಪರಿಶುದ್ಧಾತ್ಮ ಯಾರೋ ಸರಿಯಾದ ಭಾವದಿಂದ ಇಲ್ಲಿಯುವರೆಗು ಯಾರಿಗೂ ಅರ್ಥವಾಗದಂತೆ ಹೋಗಿದೆ. ಯೇಸು ಶಿಲುಬೆ ಹಾಕಲ್ಪಟ್ಟು ತಾತ್ಕಾಲಿಕ ಮರಣವನ್ನು ಹೊಂದಿ ಪೂರ್ತಿ ಮರಣಿಸದಂತೆ ಮರಣಿಸಿದಹಾಗೆ ಕಾಣಿಸುವುದು, ಶ್ವಾಸ ನಿಂತುಹೋಗುವುದು, ಶವವಾಗಿ ಬದಲಾಗುವುದನ್ನು ತಾತ್ಕಾಲಿಕ ಮರಣ ಎನ್ನುತ್ತೇವೆ. ಈ ವಿಷಯ ಅರ್ಥವಾಗಬೇಕೆಂದರೂ, ಯೇಸು ಶಿಲುಬೆ ಮೇಲೆ ಮರಣಿಸಲಿಲ್ಲವೆಂದು ತಿಳಿಯಬೇಕೆಂದರೂ ನಮ್ಮ ರಚನೆಯಲ್ಲಿನ **"ಮರಣ ರಹಸ್ಯ"** ಎನ್ನುವ ಗ್ರಂಥವನ್ನು ನೋಡಿರಿ. ಕೇವಲ ಮೂವತ್ತುಮೂರು ಗಂಟೆಗಳು (33) ಮರಣಸ್ಥಿತಿಯಲ್ಲಿದ್ದು, ಎರಡನೇ ದಿನ 48 ಗಂಟೆಗಳು ಸಹ ಪೂರ್ತಿ ಯಾಗದ ಮೊದಲೆ ಮರಣದಿಂದ ಮೇಲೇಳುವುದು ನಡೆದಿದೆ. ಮರಣದಿಂದ ಎದ್ದ ನಂತರ ಸುಮಾರು ನಲವತ್ತು ದಿನಗಳಿದ್ದು, ಮೂವತ್ತುಮೂರು ಸಲ ತನ್ನ ಶಿಷ್ಯರಿಗೆ ಕಾಣಿಸಿದ್ದಾನೆ. ಹಾಗೆ ಕಾಣಿಸಿದ ಯೇಸು ತನ್ನ ಕೊನೆಯ ದರ್ಶನದಲ್ಲಿ ಶಿಷ್ಯರಿಗೆ ಒಂದು ಮುಖ್ಯವಾದ ಮಾತು ಹೇಳಿದ್ದಾನೆ. ಯಾರಾದರೂ ಜೀವನದ ಕೊನೆಯಲ್ಲಿ ತನ್ನವರಿಗೆ ಹೇಳುವ ಮಾತು ಮುಖ್ಯವಾದುದಾಗಿರುತ್ತದೆ.

ಹಾಗೆಯೇ ಯೇಸು ತನ್ನ ಜೀವನದಲ್ಲಿ ಕೊನೆಯ ಭೇಟಿಯಾದ್ದರಿಂದ ಹೀಗೆ ಹೇಳಿದ್ದಾನೆ. ಮತ್ತಾಯ ಸುವಾರ್ತೆ 28ನೇ ಅಧ್ಯಾಯ 19,20 ವಾಕ್ಯಗಳನ್ನು ನೋಡಿರಿ. **"ನೀವು ಹೋಗಿ ಸಮಸ್ತ ಜನರನ್ನು ಶಿಷ್ಯರನ್ನಾಗಿ ಮಾಡಿರಿ. ತಂದೆವೊಂದರ, ಕುಮಾರನೊಂದರ, ಪರಿಶುದ್ಧಾತ್ಮವೊಂದರ ನಾಮದಿಂದ ಅವರಿಗೆ ಬಾಪ್ತಿಸ್ಮಕೊಡುತ್ತಾ, ನಾನು ನಿಮಗೆ ಯಾವಯಾವ ಸಂಗತಿಗಳನ್ನು ಆಜ್ಞಾಪಿಸಿದ್ದೇನೋ, ಅವುಗಳೆಲ್ಲವನ್ನು ಕೈಗೊಳ್ಳಬೇಕೆಂದು ಅವರಿಗೆ ಬೋಧಿಸಿರಿ. ನೋಡಿರಿ ನಾನು ಯುಗ ಸಮಾಪ್ತಿವರೆಗು ಸದಾಕಾಲ (ಎಲ್ಲಕಾಲ) ನಿಮ್ಮೊಂದಿಗೆ ಇದ್ದೇನೆಂದು ಅವರ ಹತ್ತಿರ ಹೇಳಿದನು,"** ಈ ವಿಧವಾಗಿ ಯೇಸು ಹೇಳಿದ ಕೊನೆಯಮಾತು ಸಮಸ್ತ ಮನುಷ್ಯರಲ್ಲಿ ಯಾರಿಗಾದರೂ ಅರ್ಥವಾಗಿದೆಯಾ? ಅಂದರೆ ಎಲ್ಲರೂ ಅರ್ಥವಾದ ಹಾಗೆ ಹೇಳುತ್ತಾರಾಗಲಿ, ಎಲ್ಲರಿಗೂ ಅರ್ಥವಾದ ಭಾವ ಬೇರೆ, ಯೇಸು ಆ ದಿನ ಹೇಳಿದ ಭಾವ ಬೇರೆ. ಆ ದಿನ ತನ್ನ ಬೊಧನೆಯನ್ನು ಪ್ರಜೆಗಳಿಗೆ ಬೋಧಿಸಿರೆಂದಿದ್ದಾನೆ. ಆ ಬೋಧನೆಯಲ್ಲಿ ತಂದೆ, ಕುಮಾರನು, ಪರಿಶುದ್ಧಾತ್ಮನನ್ನು ಕುರಿತೇ ಹೇಳಿರೆಂದಿದ್ದಾನೆ. ಇದು ದೇವರು ಮನುಷ್ಯರಿಗೆ ಕೊಟ್ಟ ಆಜ್ಞೆ, ಆದರೆ ದೇವರು ಹೇಳಿದ ಕೆಲಸವನ್ನು ಯಾವ ಬೋಧಕನಾದರೂ ಮಾಡುತ್ತಿದ್ದಾನಾ? ಎಂದರೆ ಅವರಿಗೇ ಅರ್ಥವಾಗದ ತಂದೆ, ಕುಮಾರನನ್ನು, ಪರಿಶುದ್ಧಾತ್ಮನನ್ನು ಕುರಿತು ಪ್ರಜೆಗಳಿಗೆ ಹೇಳದೆ, ಕೇವಲ ಮಾಯೆಯಿಂದ ಕೂಡಿಕೊಂಡ ಮತವನ್ನು ಕುರಿತೇ ಬೋಧಿಸುತ್ತಿದ್ದಾರೆ. ಹಿಂದೂಗಳು ತಮ್ಮ ಮತವನ್ನು ಕಾಪಾಡಿ ಕೊಳ್ಳಬೇಕೆಂದು ಮತದ ಹಿಂದೆಯೇ ಹೋಗುತ್ತಿದ್ದಾರೆ. ಕ್ರೈಸ್ತವರು ತಮ್ಮ ಮತವನ್ನು ವೃದ್ಧಿ ಮಾಡಿಕೊಳ್ಳಬೇಕೆಂದು ಮತದ ಹಿಂದೆ ಬಿದ್ದಿದ್ದಾರೆ.

ಭಗವದ್ಗೀತೆಯಲ್ಲಿ ಹೇಳಿದ ಪ್ರಕಾರ ಹಿಂದೂಗಳು ಇಲ್ಲ, ಹಾಗೆಯೇ ಬೈಬಲ್ ಗ್ರಂಥದಲ್ಲಿ ಯೇಸು ಹೇಳಿದಂತೆ ಕ್ರೈಸ್ತವರು ಇಲ್ಲ. ಇಬ್ಬರೂ ದೈವಿಕ ಭಾವವನ್ನು ಬಿಟ್ಟು, ಪ್ರಪಂಚ ಭಾವದಿಂದ ಕೂಡಿಕೊಂಡ ಮತ ವಿಧಾನದಲ್ಲಿ ಬಿದ್ದುಹೋಗಿದ್ದಾರೆ. ಬೈಬಲ್‌ನಲ್ಲಾಗಲಿ, ಭಗವದ್ಗೀತೆಯಲ್ಲಾಗಲಿ ದೇವರು ಮತ ಎನ್ನುವ ಮಾತನ್ನೇ ಹೇಳಲಿಲ್ಲ. ಈ ಎರಡು ಗ್ರಂಥಗಳಲ್ಲಿಯೂ ಮತ್ತು ಅಂತಿಮ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿಯೂ ದೇವರು ತನ್ನ ಜ್ಞಾನವನ್ನು ಮಾತ್ರ ಸೂತ್ರಬದ್ಧವಾಗಿ ಬೋಧಿಸಿದ್ದಾನೆಯೇ ಹೊರತು, ಮತ ಪ್ರಸಕ್ತಿಯನ್ನು ಎಲ್ಲಿಯೂ ಹೇಳಲಿಲ್ಲ. ನಾವು ಈ ದಿನ ಮೂರು ದೈವ ಗ್ರಂಥಗಳ ಪ್ರಕಾರ ಮನುಷ್ಯರು ಮಾಡುವ ಮತ ಪ್ರಚಾರಗಳನ್ನು, ಮತಾಂತರಗಳನ್ನು ಪೂರ್ತಿಯಾಗಿ ಖಂಡಿಸುತ್ತಿದ್ದೇವೆ. ನಾನು ದೇವರ ಮಾತನ್ನು ಅನುಸರಿಸುತ್ತಿರುವುದರಿಂದ, ಯಾವ ಮತದಕಡೆಯು ಗಮನ ಕೂಡ ಸೆಳೆಯದೆ ಒಂದು ಪಕ್ಷವಲ್ಲದೆ, ಎರಡು ಮತದವರನ್ನು ಸಮಾನವಾಗಿ ನೀವು ದೇವರ ಜ್ಞಾನದ ಪ್ರಕಾರ ನಡೆಯುತ್ತಿದ್ದೀರಾ? ಎಂದು ಕೇಳುತ್ತಿದ್ದೇನೆ. ನಾನು ಹುಟ್ಟಿರುವುದು ಹಿಂದೂ ಕುಟುಂಬದಲ್ಲೆಂದು ಹಿಂದೂಗಳಕಡೆ ಮಾತನಾಡುವುದಾಗಲಿ, ಇತರ ಮತಗಳನ್ನು ಅಸೂಯ ಭಾವದಿಂದ ನೋಡುವುದಾಗಲಿ ಇಲ್ಲ. ಎರಡು ಮತಗಳಲ್ಲಿರುವ ತಪ್ಪುಗಳನ್ನು ಬಹಿರ್ಗತ ಮಾಡಿ ಕೇಳುತ್ತಿದ್ದೇವೆ. ಹಾಗೆ ಮಾಡುವುದರಿಂದ ಎಲ್ಲಾ ಮತದವರನ್ನು ಅವರ ಮತ ಧ್ಯಾಸದಿಂದ ದೇವರ ಧ್ಯಾಸದ ಕಡೆಗೆ ಬದಲಾಯಿಸುವುದಕ್ಕೇ ಎಂದು ತಿಳಿಯಬೇಕು.

ನಾನು ಬರೆದ ಅನೇಕ ಗ್ರಂಥಗಳಲ್ಲಿ ಹೆಚ್ಚಾಗಿ ಹಿಂದೂಗಳಿಗೆ ಜ್ಞಾನವನ್ನು ಹೇಳುತ್ತಾ ಬಂದಿದ್ದೇನೆ. ನಮ್ಮ ಬೋಧನೆಯಲ್ಲಿ ಮೂರು ದೈವ ಗ್ರಂಥ ವಿಷಯಗಳು ಪ್ರಸ್ತಾಪಿಸುತ್ತಾ ಬಂದಿದ್ದೇವೆ. ನನಗೆ ದೈವ ಭಾವದ ಪ್ರಕಾರ ಎಲ್ಲಾ ಮತಗಳೂ ಸಮಾನವೇ, ಮೂರು ದೈವ ಗ್ರಂಥಗಳಲ್ಲಿನ ಜ್ಞಾನವೂ ಸಮಾನವೇ. ಆದ್ದರಿಂದ ನನ್ನ ಬೋಧನೆಗಳು ತಪ್ಪು ಮಾಡಿದವರನ್ನು ಹಿರಿಯರು ದಂಡಿಸಿದಂತೆ, ಯಾವ ಮತದಲ್ಲಿ ತಪ್ಪುಗಳು ಕಾಣಿಸಿದರೂ, ಅವುಗಳನ್ನು

ಸರಿಮಾಡುವುದಕ್ಕೆ ಹೇಳಿದ ಮಾತುಗಳು, ನಿಮ್ಮ ಹಿರಿಯರು ನಿಮ್ಮನ್ನು ದಂಡಿಸಿದ ಹಾಗೆ ಇರುತ್ತದೆ. ಪ್ರಸ್ತುತ ಇಂದೂ, ಕ್ರೈಸ್ತವನಾ ಎನ್ನುವ ಹೆಸರಿನಿಂದ ಬರೆಯುವ ಗ್ರಂಥದಲ್ಲಿ ಇಲ್ಲಿಯವರೆಗೂ ಎರಡುಕಡೆ ಸಮಾನವಾಗಿ ಹೇಳುತ್ತಾ ಬಂದರೂ, ಈಗಿನಿಂದ ಕ್ರೈಸ್ತವ ಬೋಧಕರು ಮತ ಪ್ರಚಾರಕ್ಕೋಸ್ಕರ ಎಂತಹ ತಿಳುವಳಿಕೆ ಯನ್ನು ಉಪಯೋಗಿಸುತ್ತಿದ್ದಾರೋ, ಎಂತಹ ಬೋಧನೆಗಳು ಮಾಡುತ್ತಿದ್ದಾರೋ ಹೇಳಬೇಕಾಗಿದೆ. ನಾವು ಹೇಳುವ ವಿಷಯಗಳು ಕೆಲವರಿಗೆ ಸ್ವಲ್ಪ ದುಃಖ ಉಂಟುಮಾಡಿದರೂ ಅವರ ತಪ್ಪನ್ನು ಅವರಿಗೆ ತೋರಿಸಿ ಮತ್ತೆ ಅಂತಹ ತಪ್ಪು ಮಾಡದ ಹಾಗೆ, ದೇವರ ಮಾರ್ಗದಕಡೆ ಅವರನ್ನು ಮರಳಿಸುವುದಕ್ಕೇ ಎಂದು ಮೊದಲೇ ಹೇಳುತ್ತಿದ್ದೇನೆ.

ಸುಮಾರು 40 ವರ್ಷಗಳ ಕೆಳಗೆ ನಾನು ಒಂದು ಹಳ್ಳಿಗೆ ಹೋಗುವುದು ನಡೆದಿದೆ. ಆಗ ನನಗೆ 23 ವರ್ಷಗಳ ವಯಸ್ಸಿತ್ತು. ಆ ಹಳ್ಳಿಯಲ್ಲಿ ಮುಸ್ಲಿಮ್‌ರು ಐದು ಅಥವಾ ಆರು ಕುಟುಂಬಗಳು ಇರುವಾಗ, ಉಳಿದ ಎಂಭತ್ತು ಕುಟುಂಗಳು ಹಿಂದೂಗಳವೇ ಇವೆ. ಆರುನೂರು ಜನಸಂಖ್ಯೆ ಇರುವ ಆ ಗ್ರಾಮದಲ್ಲಿ ಮುಸ್ಲಿಮ್‌ರನ್ನು ಸುಲಭವಾಗಿ ಅವರ ವೇಷಧಾರಣೆಯನ್ನನುಸರಿಸಿ ಗ್ರಹಿಸಬಹುದು. ಆದರೆ ಒಬ್ಬ ವ್ಯಕ್ತಿಯನ್ನು ನೋಡಿ ಈತನು ಹಿಂದೂ ಅಥವಾ ಮುಸ್ಲಿಮಾ ಎಂದು ಅನುಮಾನ ಬಂದಿದೆ. ಆಗ ನನ್ನ ಅನುಮಾನ ನಿವೃತ್ತಿಗಾಗಿ ನಿನ್ನದು ಯಾವ ಮತವೆಂದು ಕೇಳಿದೆನು. ಆ ಮಾತಿಗೆ ಆತನು ಅರ್ಥ ವಾಗದಿರುವವನಂತೆ ನನ್ನಕಡೆ ನೋಡಿದನು. ಆತನಿಗೆ ನನ್ನಮಾತು ಅರ್ಥವಾಗಲಿಲ್ಲವೆಂದು, ಅದೇ ಮಾತನ್ನೇ ಸ್ವಲ್ಪ ಬದಲಾಯಿಸಿ ಅರ್ಥವಾಗುವ ಹಾಗೆ ನೀನು ಯಾವ ಮತಸ್ಥನು ಎಂದು ಕೇಳಿದೆನು. ಆ ಮಾತಿಗೆ ಆತನು ನಾನು ಕನ್ನಡಿಗ ಎಂದನು. ಆತನು ಮೊರಟಾಗಿ "ಕನ್ನಡಿಗ" ಎಂದು ಹೇಳಿದಾಗ ಆತನಿಗೆ ಮತ ಎನ್ನುವ ವಿಷಯವೇ ತಿಳಿಯದೆಂದು ನನಗೆ ಅರ್ಥವಾಗಿಹೋಗಿದೆ. ಕೆಲವು ಕಡೆ ನಾಗರಿಕತೆಯಿಲ್ಲದೆ ಕುಗ್ರಾಮಗಳಲ್ಲಿ ಹಿಂದೂಗಳು ಮುಸ್ಲಿಮ್‌ರು ಸೇರಿ ಬದುಕುತ್ತಿದ್ದರೂ ಅವರಿಗೆ ಮತವೆಂಬ ಧ್ಯಾಸವಿಲ್ಲ. ಮತದ್ವೇಷಗಳು

ಇಲ್ಲ. ಅಂತಹವರಿಗೆ ಅವರು ಮಾತನಾಡುವ ಭಾಷೆಯನ್ನನುಸರಿಸಿ ನಾನು ಕನ್ನಡಿಗನು, ನಾನು ಮುಸ್ಲಿಮ್ ಎಂದು ಅನ್ನುತ್ತಿದ್ದಾರೆ. ಕನ್ನಡ ಭಾಷೆ ಮಾತನಾಡುವವನು ಕನ್ನಡಿಗನೆಂದು, ತುರುಕು ಭಾಷೆ (ಉರ್ದೂಭಾಷೆ) ಯನ್ನು ಮಾತನಾಡುವವನು ತುರುಕನೆಂದು ಹೇಳುವುದು ಆ ಹಳ್ಳಿಯಲ್ಲಿ ಅಭ್ಯಾಸವಾಗಿದೆ. ಅವರು ಭಾಷೆಯನ್ನನುಸರಿಸಿ ಅವರನ್ನು ಸ್ವಲ್ಪ ಬೇರೆಯಾಗಿ ಹೇಳಿಕೊಳ್ಳುತ್ತಿದ್ದಾರೆ ಹೊರತು ಅವರಿಗೆ ಮತ ಎನ್ನುವುದೇ ತಿಳಿಯದ ಸ್ಥಿತಿಯಲ್ಲಿ ಇದ್ದಾರೆಂದು ಅರ್ಥವಾಗುತ್ತಿದೆ.

ಹತ್ತು ವರ್ಷಗಳ ನಂತರ ಅದೇ ಊರಿಗೆ ನಾನು ಹೋಗುವುದು ನಡೆದಿದೆ. ಹತ್ತು ವರ್ಷಗಳ ನಂತರ ಸಹ ಆ ಊರಿನ ಅಭಿವೃದ್ಧಿಯಲ್ಲಿ ಯಾವ ಬದಲಾವಣೆ ಕಾಣಿಸಲಿಲ್ಲ ಆದರೆ ಮನುಷ್ಯರಲ್ಲಿ ಸ್ವಲ್ಪ ಬದಲಾವಣೆ ಕಾಣಿಸಿದೆ. ಮೊದಲು ಅವರು ಮಾತನಾಡುವ ಭಾಷೆಯನ್ನನುಸರಿಸಿ ನಾನು ತೆಲುಗಿನವನು, ತುರುಕನೆಂದು ಹೇಳಿಕೊಳ್ಳುವವರು ಸ್ವಲ್ಪ ಬದಲಾವಣೆಹೊಂದಿ, ನಾನು ಹಿಂದೂವು, ನಾನು ಮುಸ್ಲಿಮ್ ಎಂದು ಹೇಳಿಕೊಳ್ಳುವ ಸ್ಥಿತಿಗೆ ಬಂದಿದ್ದಾರೆ. ಹತ್ತು ವರ್ಷಗಳ ಕೆಳಗೆ ನೋಡಿದವರನ್ನು ನೋಡಿದ ನಾನು, ಹತ್ತು ವರ್ಷಗಳ ನಂತರ ಅವರಲ್ಲಿ ಬಂದಿರುವ ಬದಲಾವಣೆಯನ್ನು ನೋಡಿ ಆಶ್ಚರ್ಯಹೋದೆನು. ಹತ್ತು ವರ್ಷಗಳ ಕೆಳಗೆ ಆ ಊರಿನಲ್ಲಿ ಒಂದು ದೊಡ್ಡಮ್ಮ ಗುಡಿ, ಒಂದು ಪೀರ್ಲ ಚಾವಡಿ ಮಾತ್ರ ಇತ್ತು. ಉಗಾದಿ ದಿನ ದೊಡ್ಡಮ್ಮ ಗುಡಿಯಲ್ಲಿ ಊರಿನವರೆಲ್ಲರೂ ಸೇರಿ ಪೂಜೆಗಳು ಮಾಡಿ, ಕೋಳಿ, ಕುರಿಗಳನ್ನು ಬಲಿಕೊಟ್ಟು ಹಬ್ಬ ಮಾಡಿಕೊಳ್ಳುತ್ತಿದ್ದರು. ಹಾಗೆಯೇ ಪೀರ್ಲ ಹಬ್ಬ ಬಂದರೆ ಊರೆಲ್ಲವೂ ಸೇರಿ ಪೀರ್ಲಹಬ್ಬ ಮಾಡಿಕೊಳ್ಳುತ್ತಿದ್ದರು. ಮುಸ್ಲಿಮ್‌ರು, ಹಿಂದೂಗಳು ಇಬ್ಬರೂ ಸೇರಿ ಎರಡು ಹಬ್ಬಗಳು ಉತ್ಸಾಹದಿಂದ ಮಾಡುವುದರಿಂದ ಯಾವುದು ಮುಸ್ಲಿಮ್ ಹಬ್ಬವೋ, ಯಾವುದು ಹಿಂದೂಗಳ ಹಬ್ಬವೋ ಅರ್ಥವಾಗುತ್ತಿರಲಿಲ್ಲ. ಈ ವಿಧವಾಗಿ ಎಷ್ಟೋ ಸ್ನೇಹಶೀಲವಾಗಿ ಹಿಂದೂಗಳು ಮುಸ್ಲಿಮ್‌ರು ಸೇರಿ ಬದುಕುತ್ತಾ, ಒಬ್ಬನ್ನೊಬ್ಬರು ಮಾಮಾ ಎಂದೋ ಚಿಕ್ಕಪ್ಪ, ದೊಡ್ಡಪ್ಪಾ ಎಂದೋ,

ಬಾವಾ ಎಂದೋ ಒಂದು ಕುಟುಂಬದಲ್ಲಿರುವವರು ಕರೆದುಕೊಂಡಂತೆ ಮಾತನಾಡಿಕೊಳ್ಳುತ್ತಿದ್ದರು. ಆ ಊರೆಲ್ಲವೂ ಒಂದೇ ಕುಟುಂಬದಂತೆ ಇರುತ್ತಿತ್ತು. ಹತ್ತು ವರ್ಷಗಳ ನಂತರ ನಾನು ಇಂತಹ ಮತದವನೆಂದು ಹೇಳಿಕೊಳ್ಳುವುದಲ್ಲದೇ, ಊರಿನ ಹೊರಗೆ ಬಯಲು ಪ್ರಾಂತದಲ್ಲಿ ಒಂದು ಮಸೀದ್‌ನ್ನು ಸಹ ಮುಸ್ಲಿಮ್‌ರು ಕಟ್ಟಿಕೊಳ್ಳುವುದು ನಡೆದಿದೆ.

ಹತ್ತು ವರ್ಷಗಳ ನಂತರ ಆ ಊರಿನಲ್ಲಿ ಹೊಸದಾಗಿ ಮಸೀದ್ ಕಾಣಿಸುವುದಲ್ಲದೆ, ಒಂದು ಕ್ರೈಸ್ತವ ಚರ್ಚ್ ಸಹ ಕಾಣಿಸಿತು. ಆದರೆ ಆ ಊರಿನೊಳಗೆ ಕ್ರೈಸ್ತವರು ಎಲ್ಲಿಂದಲೋ ಬರಲಿಲ್ಲ. ಆ ಊರಿನ ಕೊನೆಯ ಭಾಗದಲ್ಲಿರುವ ದಲಿತ ಕುಟುಂಬಗಳು ಕೆಲವು, ಊರಿನ ಮಧ್ಯದಲ್ಲಿರುವ ಯಾದವ ಕುಟುಂಬಗಳು ಕೆಲವು, ವಾಲ್ಮೀಕಿ ಕುಟುಂಬಗಳು ಕೆಲವು ಸೇರಿ ಕ್ರೈಸ್ತವರಾಗಿ ಬದಲಾಗಿ, ಅವರು ಭಾನುವಾರ ಪ್ರಾರ್ಥನೆಗಾಗಿ ಚರ್ಚಿಯನ್ನು ನಿರ್ಮಿ ಸಿಕೊಂಡಿದ್ದಾರೆ. ಹತ್ತು ವರ್ಷಗಳ ಕೆಳಗೆ ಮತಗಳ ಹೆಸರುಗಳು ಸಹ ತಿಳಿಯದವರು, ನಂತರ ಮೂರು ಮತದವರಾಗಿ ಹೇಳಿಕೊಳ್ಳುವುದು ಪ್ರಾರಂಭಿಸಿದ್ದಾರೆ. ಮೊದಲು ಯಾರ ದೇವರು ಯಾರೋ ತಿಳಿಯದವರು, ನಮ್ಮ ದೇವರು ಈತನು ಅವರ ದೇವರು ಆತನು ಎಂದು ಹೇಳಿಕೊಳ್ಳುವ ಸ್ಥಿತಿಗೆ ಬಂದಿದ್ದಾರೆ. ನಂತರ ಎರಡು ಮೂರು ವರ್ಷಗಳಿಗೆ ಸ್ವಲ್ಪ ನಾಗರಿಕತೆಯಾಗಿ ಬದಲಾದರು, ಆ ಊರಿನ ಹಿಂದೂ ಪ್ರಜೆಗಳಲ್ಲಿ ಹಿಂದೂಮತದ ಮೇಲೆ ಅಭಿಲಾಷೆ ಬೆಳೆದಿದೆ. ಹಿಂದೂಗಳಿಗೆ ದೇವರು ರಾಮನೆಂದು ರಾಮನ ದೇವಾಲಯವನ್ನು ಊರಿನ ಮಧ್ಯದಲ್ಲಿ ಕಟ್ಟಿಸುವುದು ನಡೆದಿದೆ. ಈ ವಿಧವಾಗಿ ಆ ಊರಿನಲ್ಲಿ ಹೊಸದಾಗಿ ಚರ್ಚಿ, ರಾಮನ ದೇವಾಲಯ ತಯಾರಾಗಿವೆ. ಮುಸ್ಲಿಮ್‌ರು ರಾಮನ ದೇವಾಲಯಕ್ಕಾಗಲಿ, ದೊಡ್ಡಮ್ಮ ದೇವಾಲಯಕ್ಕಾಗಲಿ ಬರುವುದು ಬಿಟ್ಟು ಅಲ್ಲಾ ಆದ ಒಂದೇ ದೇವರನ್ನು ಆರಾಧಿಸುವುದು ಬಿಟ್ಟರೆ ಇತರ ದೇವತೆಗಳಿಗೆ ಮುಗಿಯುವುದು ತಪ್ಪು ಎಂದು ಹೇಳಿಕೊಳ್ಳುತ್ತಿದ್ದರು. ಕ್ರೈಸ್ತವರು ಎಲ್ಲರಿಗೂ ಸೃಷ್ಟಿಕರ್ತನಾದ ಯೆಹೋವಾನೆ ದೇವರು ಎನ್ನುತ್ತಿದ್ದರು.

ಇನ್ನು ಉಳಿದ ಹಿಂದೂಗಳು ನಮ್ಮ ರಾಮನೇ ದೇವರು ಎನ್ನುತ್ತಿದ್ದರು. ಈ ವಿಧವಾಗಿ ಭಿನ್ನ ಭಾವಗಳಿಂದ ಏಕತ್ವವಾಗಿ, ಒಂದೇ ಕುಟುಂಬವಾಗಿರುವ ಆ ಊರಿನಲ್ಲಿ ಭಿನ್ನತ್ವಗಳು ಏರ್ಪಟ್ಟು ಅಭಿಪ್ರಾಯ ಭೇದಗಳು ಬೆಳೆದುಹೋಗಿವೆ. ಆ ಪ್ರಾಂತದಲ್ಲಿ ಹೊಸ ಪ್ರಾಜೆಕ್ಟು ಕಟ್ಟುವುದರಿಂದ, ಆ ಭೂಮಿಗಳೆಲ್ಲ ಸಸ್ಯಶ್ಯಾಮಲವಾಗಿ ಬೆಳೆಗಳು ಬೆಳೆದು ಊರೆಲ್ಲವೂ ಆರ್ಥಿಕವಾಗಿ ಬೆಳೆದುಹೋಗಿ ಒಳ್ಳೆಯ ಸಾಮರ್ಥ್ಯ ಹೊಂದಿದವರಾಗಿ, ಎಷ್ಟೋ ಸುಖಮಯವಾದ ಜೀವನ ಕಳೆಯುವವರಾಗಿ ತಯಾರಾಗಿದ್ದಾರೆ. ಆದರೆ ಮಾಯೆ ಮತವೆಂಬ ಬೆಂಕಿಯನ್ನಿಟ್ಟು ಅದು ಉರಿಯುವಂತೆ ಮಾಡಿ, ಒಬ್ಬರ ಮಧ್ಯೆ ಒಬ್ಬರಿಗೆ ಘರ್ಷಣೆ ವಾತಾವರಣವನ್ನು ಸೃಷ್ಠಿಸಿ, ಅವರನ್ನು ಮಾನಸಿಕವಾಗಿ ಕುಗ್ಗುವಂತೆ ಮಾಡಿ ಹಾಯಾಗಿ ಬದುಕಲು ಬಿಡುತ್ತಿಲ್ಲ.

ಇದೆಲ್ಲವೂ ಗಮನಿಸಿದರೆ ನಲವತ್ತು ವರ್ಷಗಳ ಕೆಳಗೆ ಆರ್ಥಿಕ ಸಾಮರ್ಥ್ಯ ಇಲ್ಲದಿದ್ದರೂ, ಹಾಯಾಗಿ ಒಂದೇ ಕುಟುಂಬವಾಗಿ ಬದುಕುತ್ತಿದ್ದ ಆ ಊರಿನ ಪ್ರಜೆಗಳು, ಇಂದು ಒಳ್ಳೆಯ ಸಾಮರ್ಥ್ಯ ಹೊಂದಿದ್ದರೂ ಐಕಮತ್ಯ ಇಲ್ಲದವರಾಗಿ ಒಬ್ಬರಿಗೊಬ್ಬರು ಶತ್ರುಗಳ ಹಾಗೆ ನೋಡಿಕೊಳ್ಳುತ್ತಾ, ಮಾನಸಿಕವಾಗಿ ಕುಗ್ಗಿಹೋಗಿ ಬದುಕಬೇಕಾಗಿ ಬಂದಿದೆ. ಒಂದು ಸಮಯದಲ್ಲಿ ಏಕ ಕುಟುಂಬವಾಗಿರುವವರು ಈ ದಿನ ಒಬ್ಬರನ್ನೊಬ್ಬರು ನಂಬದ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಇದಕ್ಕೆಲ್ಲಾ ಕಾರಣ ಆ ಊರಿನೊಳಗೆ **'ಮತಮ್ಮಾರಿ'** (ಮಾಯೆ) ಪ್ರವೇಶಿಸುವುದೇ ಎಂದು ತಿಳಿಯುತ್ತಿದೆ. ಒಂದು ಊರಿನಲ್ಲಿಯೇ ಅಲ್ಲದೆ ಒಂದು ದೇಶದಲ್ಲಿಯೇ ಅಲ್ಲದೆ ಒಟ್ಟು ಪ್ರಪಂಚವೆಲ್ಲಾ ಈ ದಿನ ಇದೇ ಪರಿಸ್ಥಿತಿ ಏರ್ಪಟ್ಟಿದೆ. ಇಷ್ಟುಜನ ಮನುಷ್ಯರ ಹಣೆಬರಹವನ್ನು ಬದಲಾಯಿಸಿದ ಮತ ಎಲ್ಲಿಯದು? ಇದನ್ನು ಯಾರು ಸೃಷ್ಠಿಸಿದ್ದಾರೆ? ಎಂದು ಪ್ರತಿ ಮನುಷ್ಯ ಪ್ರಶ್ನಿಸಿಕೊಂಡು ನೋಡಬೇಕಾದ ಅಗತ್ಯವಿದೆ.

ದೇವರು ಮನುಷ್ಯರಿಗೆ ಪ್ರಸಾದಿಸಿದ ಮೂರು ದೈವ ಗ್ರಂಥಗಳಲ್ಲಿ ದೇವರ ಜ್ಞಾನ ಜೋಡಿಸಲಾಗಿದೆ. ಅಷ್ಟೇ ಅಲ್ಲದೆ ದೇವರ ಜ್ಞಾನವನ್ನು ಇತರರಿಗೆ

ತಿಳಿಸೆಂದು ಸಹ ಹೇಳಲಾಗಿದೆ. ಆದ್ದರಿಂದ ಗ್ರಂಥಗಳಲ್ಲಿನ ಜ್ಞಾನವನ್ನು ತಿಳಿದವರು ತಿಳಿಯದವರಿಗೆ ಹೇಳುವುದು ನಡೆಯುತ್ತಿದೆ. ತಿಳಿದವರು ತಿಳಿಯದವರಿಗೆ ಹೇಳುವುದು ಸೇವಾ ಧರ್ಮವಾಗುತ್ತದೆ. ದೇವರ ಜ್ಞಾನವನ್ನು ಇತರರಿಗೆ ತಿಳಿಸುವುದು ದೇವರಿಗೆ ಸೇವೆ ಮಾಡಿದಷ್ಟು ಸಮಾನವಾಗುತ್ತದೆ. ದೇವರನ್ನು ಮನುಷ್ಯ ಪೂಜಿಸಿದರೂ ಅಥವಾ ಪ್ರಾರ್ಥಿಸಿದರೂ ದೇವರಿಗೆ ಇಷ್ಟ ಇರುವುದಿಲ್ಲ. ತನ್ನ ಜ್ಞಾನವನ್ನು ಪ್ರಚಾರ ಮಾಡುವವನನ್ನು ಇಷ್ಟಪಡುತ್ತಾನೆ. ಆದ್ದರಿಂದ ದೇವರ ಜ್ಞಾನವನ್ನು ತಿಳಿದವರು ತಿಳಿಯದವರಿಗೆ ಹೇಳುವುದಕ್ಕಿಂತ ಪ್ರಪಂಚದಲ್ಲಿ ಉತ್ತಮವಾದ ಕೆಲಸ ಇಲ್ಲವೆಂದು ಹೇಳಬಹುದು. ಆದರೆ ದೇವರು ಕೊಟ್ಟ ಗ್ರಂಥಗಳಲ್ಲಿನ ಜ್ಞಾನವನ್ನು ಮೊದಲು ನಾವು ಓದಿ ತಿಳಿದುಕೊಂಡು ನಂತರ ಇತರರಿಗೆ ಹೇಳುವುದು ಸುಲಭವೇ ಅಲ್ಲವೆ! ಇದರಲ್ಲಿನ ಕಷ್ಟವೇನಿದೆಯೆಂದು ಯಾರಾದರೂ ಅಂದುಕೊಳ್ಳಬಹುದು. ಅಷ್ಟು ಸುಲಭವಾದ ಕೆಲಸ ದೇವರ ಲೆಕ್ಕದಲ್ಲಿ ಎಷ್ಟೋ ಶ್ರೇಷ್ಟವಾದುದಾದಾಗ, ಆ ಕೆಲಸವನ್ನೇ ಮಾಡಿ ದೇವರಿಗೆ ಇಷ್ಟನಾಗಿ ಇರಬೇಕೆಂದು ತಿಳಿದು, ಕೆಲವರು ದೇವರ ಜ್ಞಾನವನ್ನು ಹೇಳುವುದು ದೇವರ ಕಾರ್ಯವಾಗಿ ಭಾವಿಸಿ ಮಾಡುತ್ತಿದ್ದಾರೆ.

ಆದರೆ ಎಷ್ಟೋ ಸುಲಭವಾಗಿ ಕಾಣಿಸುವ ದೈವ ಜ್ಞಾನಬೋಧನೆಯ ಮರೆಯಲ್ಲಿ ಕಾಣಿಸದಂತೆ ಮಾಯೆ ಎನ್ನುವುದು ಸಹ ಇದೆಯೆಂದು ಯಾರಿಗೂ ತಿಳಿಯದು. ದೈವ ಜ್ಞಾನ ಯಾರಿಗಾದರೂ ಅಷ್ಟು ಸುಲಭವಾಗಿ ಸಿಗದಂತೆ ಮಾಡುವುದಕ್ಕೆ ದೇವರೇ ಮಾಯೆಯನ್ನು ಸೃಷ್ಠಿಸಿ ಇಟ್ಟಿದ್ದಾನೆ. ಆದ್ದರಿಂದ ಜ್ಞಾನ ತಿಳಿದು ಹೇಳುತ್ತಿದ್ದೇನೆಂದು ಅಂದುಕೊಳ್ಳುವವನ ಹತ್ತಿರ ದೇವರ ಜ್ಞಾನವಿದೆಯೋ ಇಲ್ಲವೋ ಎಂಬುದೂ ಸಹ ಅರ್ಥವಾಗದಂತೆ ಮಾಯೆ ಮಾಡುತ್ತಿದೆ. ಇದನ್ನೆಲ್ಲಾ ಗಮನಿಸಿದರೆ ದೇವರ ಜ್ಞಾನ ಸುಲಭವಾದುದೆಂದು ಅಂದುಕೊಂಡರೂ, ದೇವರಿಗೆ ಇಷ್ಟವಿಲ್ಲದವನಿಗೆ ಅತಿ ಕಷ್ಟವಾಗಿಯೇ ಇರುತ್ತದೆ. ಗ್ರಂಥವಿದೆ, ನಾನು ನೋಡಿ ಓದಿಕೊಳ್ಳುತ್ತೇನೆ. ಜ್ಞಾಪಕ ಇಟ್ಟುಕೊಂಡು ಪುನಃ ಹೇಳಬಲ್ಲೆನು. ಒಂದು ಸಲ ನೋಡಿದಷ್ಟುಮಾತ್ರಕ್ಕೆ ಹೇಗಾದರೂ ಅದನ್ನು

ವರ್ಣಿಸಿ ಹೇಳಬಲ್ಲೆನು ಎಂದು ಅಂದುಕೊಳ್ಳುವವರಿಗೂ ಸಹ ಅರ್ಥವಾದಂತೆ ಇದ್ದರೂ, ಮಾಯೆ ಪ್ರಭಾವದಿಂದ ಆತನು ಜ್ಞಾನಕ್ಕೆ ಸ್ವಲ್ಪ ದೂರದಲ್ಲಿರುತ್ತಾನೆ. ಆದ್ದರಿಂದ ಮೊದಲು ಜ್ಞಾನ ತಿಳಿದುಕೊಂಡು ಇತರರಿಗೆ ಬೋಧಿಸುವವರ ಹತ್ತಿರದಿಂದ ಮಾಯೆ ಆರಂಭವಾಗಿ, ಜ್ಞಾನ ಕೇಳುವವನವರೆಗೂ ಇದ್ದು, ಯಾರಿಗೆ ಏನು ಅರ್ಥವಾಗಬೇಕೋ, ಯಾರಿಗೆ ಯಾವುದು ಅರ್ಥವಾಗ ಬಾರದೋ ಹಾಗೆಯೇ ನೋಡಿ ಮಾಡುತ್ತಿದೆ. ಮಾಯೆ ಪ್ರಭಾವವನ್ನು ಉಪಯೋಗಿಸಿ ಹೇಳುವವನಿಗೆ ಕೆಲವು ವಿಷಯಗಳನ್ನು ತಿಳಿಯದಂತೆ ಮಾಡಬಲ್ಲದು. ಹಾಗೆ ಕೇಳುವವನಿಗೆ ಏನು ಅರ್ಥವಾಗಬಾರದೋ, ಏನು ಅರ್ಥವಾಗಬೇಕೋ ಹಾಗೆಯೇ ಅರ್ಥವಾಗುವಂತೆ ಮಾಯೆ ಮಾಡುತ್ತದೆ. ದೇವರ ಆಜ್ಞೆಗೆ ಒಳಪಟ್ಟು ಕೆಲಸ ಮಾಡುವ ಮಾಯೆ, ದೇವರಮಾರ್ಗದಲ್ಲಿ ಸ್ವಾರ್ಥಬುದ್ಧಿ ಇರುವವನಿಗೆ, ವಂಚನೆ ಬುದ್ಧಿ ಇರುವವನಿಗೆ ದೇವರ ಜ್ಞಾನದಲ್ಲಿನ ಅಸಲಾದ ಭಾವವನ್ನು ತಿಳಿಯದಂತೆ ಮಾಡಿ, ಅವನಿಗೆ ಮಾತ್ರ ಎಲ್ಲವೂ ತಿಳಿದಹಾಗೆ ತೃಪ್ತಿಹೊಂದಿಸುತ್ತದೆ. ಆಗ ಅವನು ನನಗೆ ದೇವರ ಜ್ಞಾನ ತಿಳಿದಿದೆ ಅಂದುಕೊಳ್ಳುತ್ತಾನಾಗಲಿ, ಅವನು ದೇವರ ಜ್ಞಾನಕ್ಕೆ ಎಷ್ಟೋ ದೂರವಿದ್ದಂತೆ ಅವನಿಗೆ ಸ್ವಲ್ಪವೂ ತಿಳಿಯದು. ದೇವರ ಜ್ಞಾನವನ್ನು ಬೋಧಿಸುವುದು ಎನ್ನುವುದು ದೇವರ ಸೇವೆ ಆದರೂ, ಮನುಷ್ಯ ಸಕ್ರಮವಾಗಿ ಇಲ್ಲದಿರುವಾಗ ಸೇವೆಯನ್ನು ಮಾಯೆ ಹೇಗಾದರೂ ಬದಲಾಯಿಸುತ್ತದೆ.

ಭೂಮಿಮೇಲೆ ಎಷ್ಟೋ ಜನ ಬೋಧಕರು ಮೂರು ಮತಗಳಲ್ಲಿಯೂ ಇದ್ದಾರೆ. ಮೂರು ಗ್ರಂಥಗಳಿಂದ ಜ್ಞಾನವನ್ನು ಗ್ರಹಿಸಿ ಇತರರಿಗೆ ಹೇಳುತ್ತಿದ್ದಾರೆ. ಆದರೆ ದೇವರಿಗೆ ಇಷ್ಟವಾಗದ ವಿಧಾನ ಏನಿದ್ದರೂ ಆತನನ್ನು ದೇವರು ಇಷ್ಟಪಡುವುದಿಲ್ಲ. ಮಾಯೆ ಅವನನ್ನು ಬಿಡುವುದಿಲ್ಲ. ಅವನಿಗೆ ತಾನು ದೊಡ್ಡ ಜ್ಞಾನಿಯೆಂದುಕೊಳ್ಳುವಂತೆ ಮಾಡಿ, ಆತನಿಗೆ ತಿಳಿಯದೇ ದೇವರಿಗೆ ದೂರವಾಗಿ ಇರುವಂತೆ ಮಾಡುತ್ತದೆ. ಈಗ ಉದಾಹರಣೆಗೆ ಒಬ್ಬ ಬೋಧಕನು ತನ್ನ ಒಳಗಿನ ಉದ್ದೇಶ ಒಂದಿರುವಾಗ ಹೊರಗೆ ಮತ್ತೊಂದು ವಿಧವಾಗಿ

ಮಾತನಾಡುತ್ತಾ, ಎದುರುಗಡೆಯವರನ್ನು ಯಾಮಾರಿಸಬೇಕೆಂದು ನೋಡುತ್ತಿರುವ ವ್ಯಕ್ತಿ, ಹೇಗೆ ತನ್ನ ಬೋಧನೆಯನ್ನು ಹೇಳುತ್ತಿದ್ದಾನೋ ನೋಡಿರಿ. ಮೊದಲು ಒಂದು ಉದ್ದೇಶವನ್ನು ಹೊರಗೆ ಕಾಣಿಸುವಂತೆ ಬರೆದು, ಪ್ರಕಟಿಸಿ ಮಾತನಾಡುತ್ತಾ ಹದಿನೈದು ನಿಮಿಷಗಳಿಗೆ ಮೊದಲ ಪ್ರಕಟಣೆಗೆ ಪೂರ್ತಿ ವಿರುದ್ಧವಾಗಿರುವ ತನ್ನೊಳಗಿನ ಉದ್ದೇಶವನ್ನು ಹೇಳುವುದು ಪೂರ್ತಿ ಕಪಟವಾಗಿ ಮಾತನಾಡಿ ದಂತಾಗುತ್ತಿದೆ. ಮೊದಲು ಒಂದು ಹೇಳಿ ನಂತರ ಎರಡನೇ ದಾರಿಯೊಳಗೆ ಉದ್ದೇಶಪೂರ್ವಕವಾಗಿ ತೆಗೆದುಕೊಂಡು ಹೋಗುವವರದು ಕಪಟಬುದ್ಧಿಯೆಂದು ನಮಗೆ ತಿಳಿಯುತ್ತಿರುವಾಗ, ಅಂತಹವರನ್ನು ದೇವರು ಒಪ್ಪಿಕೊಳ್ಳುವುದಿಲ್ಲ, ಮಾಯೆ ಒಪ್ಪಿಕೊಳ್ಳುವುದಿಲ್ಲ. ನಾನು ಹೇಳುವುದು ದೇವರ ಜ್ಞಾನವೇ ಅಲ್ಲವೆ! ಎಂದು ಬುಕಾಯಿಸಿದರೂ ದೇವರ ಜ್ಞಾನವನ್ನು ನಿನ್ನ ಇಷ್ಟಬಂದಂತೆ ಬಳಸಿಕೊಂಡು, ದೇವರ ಜ್ಞಾನದಿಂದ ಚೆಲ್ಲಾಟವಾಡಿದರೆ ಅಂತಹ ಬೋಧಕನು ಯಾರಾದರಾಗಲಿ, ಅವನನ್ನು ಮಾಯೆ ದೇವರಿಂದ ದೂರವಾಗಿಟ್ಟು, ದೇವರ ಜ್ಞಾನ ಅಲ್ಲದಿರುವುದನ್ನೇ ಮಾಯೆ ಆತನಿಗೆ ಅಂಟಿಸುತ್ತದೆ. ಎಂತಹ ಬೋಧನೆಯನ್ನು ನೋಡಿ ದೇವರು ಇಷ್ಟಪಡುವುದಿಲ್ಲವೋ ಉದಾಹರಣೆಗೆ ಒಂದನ್ನು ನೋಡೋಣ.

ಒಬ್ಬ ಹಿಂದೂ ಕ್ರೈಸ್ತವನಾಗಿ ಬದಲಾಗುವುದು, ಬದಲಾದ ನಂತರ ಅಲ್ಲಿಗೆ ಸುಮ್ಮನಿರದೇ ಹಿಂದೂಮತವನ್ನು ಪ್ರೇಮಿಸುವಂತೆ ಪುನಃ ಹಿಂದೂವಾಗಿ ಬದಲಾಗಬೇಕೆಂದುಕೊಂಡ ಹಾಗೆ ಮೇಲ್ನೋಟಕ್ಕೆ ಹೇಳುತ್ತಾ ಕ್ರೈಸ್ತವ ಮತವನ್ನು ಪ್ರಚಾರ ಮಾಡುವುದಕ್ಕೆ ಹಿಂದೂಮತವನ್ನು ಎರೆಯಾಗಿ ಬಳಸಿಕೊಳ್ಳುತ್ತಾ, ವೇದಗಳನ್ನು ದೊಡ್ಡದಾಗಿ ಹೇಳುವುದು ಅವು ಸಹ ಕ್ರೈಸ್ತವ ಮತವನ್ನು ಸೂಚಿಸಿದಂತೆ ಬಹು ತಿಳುವಳಿಕೆಯಿಂದ ಬರೆದು ಪ್ರಚುರಿಸಿದ ಒಂದು ಪತ್ರಿಕೆ ಹೀಗೆ ಇದೆ.

# ನಾನು
# ಹಿಂದೂವಾಗಿ ಬದಲಾಗಬೇಕೆಂದುಕೊಂಡಿದ್ದೇನೆ

ನಾನೀಮಧ್ಯೆ ನನ್ನಲ್ಲಿ ನಾನೇ ಬಹಳ ವೇದನೆಯನ್ನು ಅನುಭವಿಸುತ್ತಿದ್ದೇನೆ.

ನನ್ನ ಸ್ವಂತ ದೇಶದಲ್ಲಿ, ನನ್ನ ಸ್ವಂತದವರ ಮಧ್ಯೆ ನಾನೇನೋ ಒಂದು ಅಪರಾಧ ಮಾಡಿದವನ ಹಾಗೆ, ಅನವಶ್ಯವಾಗಿ ಅವಮಾನದ ಪಾಲಾಗಿ ಹೋಗಿದ್ದೇನೆ.

ಪ್ರತಿಯೊಬ್ಬನು ನನ್ನನ್ನು ಅಸಹ್ಯಕರವಾದ ವ್ಯಕ್ತಿಯಾಗಿ, ಅಂಟಬಾರದವನಾಗಿ ನೋಡುತ್ತಿದ್ದಾನೆ. ಒಬ್ಬ ಮೋಸಗಾರನಾಗಿ, ಒಬ್ಬ ವಿದೇಶೀ ವ್ಯಕ್ತಿಯಾಗಿ ನನ್ನನ್ನು ಎಲ್ಲರೂ ಪರಿಗಣಿಸುತ್ತಿದ್ದಾರೆ. ನನ್ನನ್ನು ದೇಶದ್ರೋಹಿಯಾಗಿ, ನೀಚನನ್ನಾಗಿ ಚಿತ್ರೀಕರಿಸುತ್ತಿದ್ದಾರೆ.

ಇಷ್ಟಕ್ಕೂ ನನ್ನವರ ಮಧ್ಯದಲ್ಲಿ ನಾನಿಷ್ಟೊಂದು ಅವಮಾನಿಸಲ್ಪಡುವುದಕ್ಕೆ ಕಾರಣ, ನಾನು ಯೇಸುಕ್ರಿಸ್ತನನ್ನು ನನ್ನ ದೇವರನ್ನಾಗಿ ಸ್ವೀಕರಿಸುವುದೇ. ನನ್ನ ದೇಶ ಹಿಂದೂದೇಶ. ತಲೆತಲಾಂತರದಿಂದ ಸಾವಿರಾರೂ ವರ್ಷಗಳಿಂದ ಈ ದೇಶ ನಂಬಿದ ಮತ, ಹಿಂದೂಮತ. ಸಾವಿರಾರೂ ವರ್ಷಗಳಿಂದ ಈ ನೆಲದ ಮೇಲೆ ಬೇರೂರಿಕೊಂಡ ಹಿಂದೂ ಮತವನ್ನು ಅಲ್ಲವೆಂದು, ಎಲ್ಲಿಯೋ ವಿದೇಶದಲ್ಲಿ ಹುಟ್ಟಿದ ಕ್ರೈಸ್ತವ ಮತವನ್ನು ನಾನು ಅವಲಂಬಿಸುವುದು ಸಹಜವಾಗಿಯೇ ನನ್ನ ಸಾಟಿ ಭಾರತೀಯರಿಗೆ ಬಾಧೆ ಉಂಟುಮಾಡಿದೆ. ಅವರ ಬಾಧೆಯನ್ನು ನೋಡುತ್ತಿದ್ದರೆ, ನನಗೂ ಬಾಧೆಯಾಗಿಯೇ ಇದೆ.

ನನ್ನವರ ದೃಷ್ಟಿಯಲ್ಲಿ ನಾನು ಅನವಶ್ಯಕವಾಗಿ ಕೆಟ್ಟವನು ಏಕೆ ಆಗಬೇಕು? ಏನೋ ನಾಲ್ಕು ತಲೆಮಾರುಗಳ ಹಿಂದೆ ನಮ್ಮ ಪೂರ್ವಿಕರು-ಯಾವ ಕಾರಣದಿಂದಲೋ, ಬಿಳಿದೊರೆಗಳ ಕಾಲದಲ್ಲಿ ಕ್ರೈಸ್ತವ ಮತದೊಳಗೆ ಬದಲಾಗಿದ್ದಾರೆ. ಈಗ ನೋಡಿದರೆ ದಿನಗಳು ಬದಲಾಗಿವೆ. ಪ್ರಸ್ತುತ ಕಾಲದಲ್ಲಿ ಕ್ರೈಸ್ತವನೆಂದು ಹೇಳಿಕೊಳ್ಳುವುದು ಏನಷ್ಟು ಗೌರವಪ್ರದವಾಗಿ ಇಲ್ಲ.

ಅಸಲಿಗೆ ಇದೆಲ್ಲಾ ಏಕೆ ಬಂದಿರುವ ಗಲಾಟೆ? ಯಾವ ಮತ ಅವಲಂಬಿಸಿದರೇನು? ಚಿತ್ತಶುದ್ಧಿ ಇದ್ದರೆ ಸಾಕಲ್ಲವೇ? ಮತಕ್ಕೊಸ್ಕರ, ನನ್ನ

ಸುತ್ತಲೂ ಇರುವ ಸಮಾಜಕ್ಕೆ ಎದುರು ಈಜುವುದು ಏಕೆ? ನನ್ನ ಸ್ವಂತದವರಿಗೆ ನಾನು ಶತ್ರುವಾಗುವುದು ಏಕೆ?

ಅದು ಅಲ್ಲದೆ–ನನಗಸಲೇ ದೇಶಾಭಿಮಾನ ಹೆಚ್ಚು! ನನ್ನ ಭೂಮಿ ಮೇಲೆ ಹುಟ್ಟಿದ ಮತವನ್ನು ಪ್ರಪಂಚಕ್ಕೆ ಸಾರಿ ಹೇಳುವುದು ನನಗೆ ಗೌರವವಾಗಿರುತ್ತದಾಗಲಿ, ಪರ ದೇಶದವರ ಮತವನ್ನು ನಾನು ನೆತ್ತಿಮೇಲಿಟ್ಟುಕೊಳ್ಳುವುದು ನನಗೆ ಮಾತ್ರ ಏನಷ್ಟು ಗೌರವವಾಗಿರುತ್ತದೆ?

ನನಗೆ, ನನ್ನವರ ಮಧ್ಯದಲ್ಲಿ ಮತ್ತೆ ಗೌರವ ಹೊಂದಬೇಕೆಂದು ಇದೆ! ಅದಕ್ಕೆ, ನಾನು ಮತ್ತೆ ಹಿಂದೂವಾಗಿ ಬದಲಾಗಿ ಹೋಗಬೇಕೆಂದುಕೊಳ್ಳುತ್ತಿದ್ದೇನೆ.

ಆದರೆ ನಾನು ಹಿಂದೂವಾಗಿ ಬದಲಾಗಬೇಕೆಂದರೆ ಏನು ಮಾಡಬೇಕೊ ನನಗರ್ಥವಾಗಲಿಲ್ಲ. ಯಾವ ಗ್ರಂಥವನ್ನು ನಾನು ಪ್ರಾಮಾಣಿಕವಾದುದಾಗಿ ಆರಿಸಬೇಕು? ಯಾವ ದೇವರನ್ನು ಸೃಷ್ಠಿ, ಸ್ಥಿತಿ ಲಯಕಾರಕನಾಗಿ ಆರಿಸಬೇಕು? ನಾನು ಆಯೋಮಯದಲ್ಲಿ ಬಿದ್ದುಹೋಗಿದ್ದೇನೆ.

ಏನಾದರೂ ಸರಿ – ನಾನು ಹಿಂದೂವಾಗಿ ಬದಲಾಗಿ, ನನ್ನ ದೇಶದಲ್ಲಿ ನಾನು ಮತ್ತೆ ಗೌರವಾನ್ವಿತವಾದ ವ್ಯಕ್ತಿಯಾಗಿ ಜೀವಿಸಬೇಕೆಂಬ ಆಸೆ ಮಾತ್ರ ಸಾಯಲಿಲ್ಲ.

ಒಂದಕ್ಕೊಂದು ಪೂರ್ತಿಯಾಗಿ ವಿರುದ್ಧವಾದ ಪುರಾಣ ಗ್ರಂಥಗಳನ್ನು ಸ್ವಲ್ಪ ಪಕ್ಕಕ್ಕಿಟ್ಟು ಅಸಲು ಹಿಂದೂಮತಕ್ಕೆ "ಬುನಾದಿ"ಯಂತಹ ವೇದಗಳ ಮೇಲೆ ದೃಷ್ಟಿ ಹಾಯಿಸಬೇಕೆಂದು ತೀರ್ಮಾನಿಸಿದ್ದೇನೆ.

ಆರ್ಯ ಸಮಾಜ ಸ್ಥಾಪಕರಾದ ಸ್ವಾಮಿ ದಯಾನಂದ ಸರಸ್ವತಿಯವರು ಹೇಳಿದ ಮಾತು ಸಹ ಅದೇ ಅಲ್ಲವೆ?

"ಪುರಾಣ ಗ್ರಂಥಗಳು ಪ್ರಾಮಾಣಿಕವಾದ ದೇವೊಕ್ತಿಗಳು ಅಲ್ಲ – ವೇದಗಳೇ ಪ್ರಮಾಣಿಕವಾದವು. ಆದ್ದರಿಂದ ಪುರಾಣ ಗ್ರಂಥಗಳನ್ನು ಬಿಟ್ಟು, ವೇದಗಳನ್ನು ಪರಿಶೋಧಿಸಿರಿ. ವೈದಿಕ ಮಾರ್ಗವನ್ನವಲಂಭಿಸಿರಿ" ಎಂದು ಘೋಶಿಸಿದ್ದಾರೆ ದಯಾನಂದ ಸರಸ್ವತಿಯವರು.

ಆ ಮಾತುಗಳು ಹೇಳಿದಕ್ಕೆ ದಯಾನಂದ ಸರಸ್ವತಿಯವರನ್ನು ದೇಶದ್ರೋಹಿ ಎಂದಾಗಲಿ ವಿದೇಶೀ ಸೇವಕ ಎಂದಾಗಲಿ ಯಾರಾದರೂ ಹೇಳುತ್ತಾರಾ?

ಅಪಚಾರ । ಅಪಚಾರ ॥ ದಯಾನಂದ ಸರಸ್ವತಿಯವರನ್ನು ಹಿಂದೂಮತ ಸಂಸ್ಕರ್ತನಾಗಿ ಆಧುನಿಕ ಪ್ರವಕ್ತನಾಗಿ ಯಾವತ್ತು ಭಾರತೀಯ ಸಮಾಜ ಗೌರವಿಸುತ್ತಾ ಇದೆ.

ಆದ್ದರಿಂದ ನಾನು ಸ್ವಾಮಿದಯಾನಂದ ಸರಸ್ವತಿಯವರ ಸಂದೇಶವನ್ನನು ಸರಿಸಿ. ವೇದಗ್ರಂಥಗಳಲ್ಲಿ ಹೇಳಲಾದ ಮಾರ್ಗದಲ್ಲಿಯೇ ಆ ಪರಮಾತ್ಮನನ್ನು ಸೇರಿಕೊಳ್ಳಬೇಕೆಂದು, ಆತನನ್ನು ತಿಳಿದುಕೊಳ್ಳಬೇಕೆಂದು ಸಂಕಲ್ಪಿಸಿದ್ದೇನೆ. ವೇದಕಾಲದಲ್ಲಿ ಭಾರತೀಯ ಋಷಿಮುನಿಗಳು ನಂಬಿದ ಸಿದ್ಧಾಂತದ ಪ್ರಕಾರವೇ ನಾನು ದೇವರನ್ನು ಸೇರಿಕೊಳ್ಳಬೇಕೆಂದು ಆಶಿಸಿದ್ದೇನೆ.

ಈ ಉದ್ದೇಶದಿಂದ ಪರಿಶೋಧನೆ ಸಾಗಿಸಿದ ನನಗೆ ಎಲ್ಲಿಲ್ಲದ ಆಶ್ಚರ್ಯ ಉಂಟಾಗಿದೆ. ಪ್ರಸ್ತುತ ಕಾಲದಲ್ಲಿ ಭಾರತೀಯ ಸಮಾಜ, ವೇದಕಾಲದ ಹಿಂದೂ ಮತ ಸಿದ್ಧಾಂತಗಳನ್ನು ಬಿಟ್ಟು ದಾರಿ ತೊಲಗಿಹೋಗಿದೆ ಎಂದು ನನಗೆ ಅರ್ಥವಾಗಿದೆ.

ವೇದಕಾಲದ ಹಿಂದೂಮತ ಸಿದ್ಧಾಂತದ ಪ್ರಕಾರ, ಮಾನವನು ಪರಮಾತ್ಮನ ಸನ್ನಿಧಿಗೆ ಸೇರುವಾಗ ಜಂತುರಕ್ತ ಪ್ರೋಕ್ಷಣೆ ತಪ್ಪದು ಎಂದು ನಾನು ಗಮನಿಸಿದ್ದೇನೆ.

ವೇದಕಾಲದಲ್ಲಿ ಹಿಂದೂಗಳು, ಬಲಿಗಳನ್ನು ಅರ್ಪಿಸಿದ್ದಾರೆ. ಯಜ್ಞಗಳು ನಿರ್ವಹಿಸಿದ್ದಾರೆ. "ಸರ್ವಪಾಪಪರಿಹಾರ ರಕ್ತಪ್ರೋಕ್ಷಣ ಮವಶ್ಯಮ್" ಎಂದರೆ "ರಕ್ತ ಚಿಂದಿಸದೆ ಪಾಪಕ್ಷಮಾಪಣೆ ಉಂಟಾಗುವುದಿಲ್ಲ" ಎಂದು ಸಾರಿ ಹೇಳಿದ್ದಾರೆ.

ಸರ್ವವಿಶ್ವಪಾಪ ಪರಿಹಾರಕ್ಕಾಗಿ ಒಂದು ಯಜ್ಞ ನಡೆಯಬೇಕಾಗಿದೆ ಎಂದು ವೇದಕಾಲದ ಹಿಂದೂ ಋಷಿಗಳು ನಂಬಿದ್ದಾರೆ. ಆ ಯಜ್ಞಕ್ಕೆ "ಅಜಾಮೇಧಂ" ಎಂದು ಹೆಸರು ಇಟ್ಟಿದ್ದಾರೆ. ಒಂದು ಮಚ್ಚೆಯಿಲ್ಲದ ಮೇಕೆಯನ್ನು ತರಬೇಕು. ಅದರ ತಲೆಮೇಲೆ ಬಲಿತಿರುವ ಮುಳ್ಳನ್ನು ಸುತ್ತಿ ಕಿರೀಟವಾಗಿ

ಇಡಬೇಕು. ಆ ಮೇಕೆಯನ್ನು ಒಂದು ಚೆಕ್ಕೆಯ ಬೆಂಚಿಗೆ ಮೊಳೆಗಳಿಂದ ಹೊಡೆದು ನೇತಾಕಬೇಕು. ಅದರ ಮೂಳೆಗಳು ಮುರಿಯದ ಹಾಗೆ ಜಾಗ್ರತೆಯಾಗಿ ಅದರ ರಕ್ತವೆಲ್ಲಾ ಸೋರಿಸಬೇಕು. ಹಾಗೆ ಆ ಮೇಕೆ ಮರಣಿಸಿದ ನಂತರ ಮತ್ತೆ ಅದಕ್ಕೆ ಪ್ರಾಣ ಕೊಡಬೇಕು. ಅದು "ಅಜಾಮೇಧಂ" ಅಂದರೆ!

ಮತ್ತೆ ಮೊದಲಿಗೆ ಬಂದಿದೆ, ವ್ಯವಹಾರ! ವೇದಕಾಲದ ಹಿಂದೂಗಳು ಮತವನ್ನು ನಾನು ನಂಬಿದರೆ– ಸತ್ತಂತೆ ಮತ್ತೆ ನಾನು ಯೇಸುಕ್ರೀಸ್ತನನ್ನೇ ನನ್ನ ದೈವವಾಗಿ ನಂಬಿಕೊಳ್ಳಬೇಕಾಗಿ ಬರುತ್ತದೆ! ಏಕೆಂದರೆ ಸಾಮವೇದದ ಪ್ರವಚನದ ಪ್ರಕಾರ ಸರ್ವಲೋಕ ಪಾಪಪರಿಹಾರಾರ್ಥ ತನ್ನ ರಕ್ತವನ್ನು ಚಿಂದಿಸಿ ಬಲಿಯಾಗಿ ಮರಣಿಸಿ ಎದ್ದವನು ಯೇಸುಕ್ರಿಸ್ತ ಒಬ್ಬನೇ ಮತ್ತೆ!

ಈಗ ನಾನು ಕ್ರಿಸ್ತನಿಗೆ ದೂರವಾದರೆ ಮಾತ್ರ, ನನ್ನ ಸೋದರ ಭಾರತೀಯರು ನನ್ನನ್ನು ಗೌರವಿಸುವುದಿಲ್ಲ. ಆದರಿಸುವುದಿಲ್ಲ ಹಾಗೆಯೇ ನಾನು ಕ್ರಿಸ್ತನಿಗೆ ದೂರವಾಗಬೇಕೆಂದರೇ ವೇದಗಳನ್ನು ನಿರ್ಲಕ್ಷಿಸುವುದೊಂದೇ ಮಾರ್ಗ.

ಅಂತಹ ದಾರುಣವನ್ನು ನಾನು ಮಾಡಲಾರೆನು. ವೇದಗಳನ್ನು ನಾನು ನಿಂದಿಸಲಾರೆನು ವೇದಗಳಲ್ಲಿ ಹೇಳಲಾದ ರಕ್ತಪ್ರೋಕ್ಷಣ, ಯಜ್ಞಕ್ಕೆ ಅಕ್ಕರೆಯಿಲ್ಲ ವೆಂದು ಕೆಲವರು ಹೇಳುತ್ತಿದ್ದಾರೆ. ಹಾಗೆ ಹೇಳುವುದು ಸನಾತನ ಹಿಂದೂ ಧರ್ಮಕ್ಕೆ ತೀರದ ದ್ರೋಹ ಮಾಡಿದಂತಾಗುತ್ತದೆ.

ನಮ್ಮ ವೇದಗಳಲ್ಲಿ ಯಜ್ಞವನ್ನು ಕುರಿತಾದ ಪ್ರಸ್ತಾವನೆ, ವಿವರಣೆ ಎಷ್ಟು ಸ್ಪಷ್ಟವಾಗಿದೆ ಎಂದರೆ ವೇದಗಳನ್ನು ಗೌರವಿಸುವವರು ಕ್ರಿಸ್ತಪ್ರಭುವನ್ನು ಯಜ್ಞಪುರುಷನನ್ನಾಗಿ ವಿಶ್ವವಿಮೋಚಕನನ್ನಾಗಿ ಜಗದ್ರಕ್ಷಕನನ್ನಾಗಿ ಅಂಗೀ ಕರಿಸುವುದು ತಪ್ಪುವುದಿಲ್ಲ. ಕ್ರಿಸ್ತಪ್ರಭುವು ಬಗ್ಗೆ ಅಕಾರಣ ದ್ವೇಷ ಬೆಳೆಸಿಕೊಂಡ ಕೆಲವರು ಭಾರತೀಯ ಪಂಡಿತರಿಗೆ ಈ ಪರಿಸ್ಥಿತಿ ಸಹಿಸಲು ಸಾಧ್ಯವಾಗುತ್ತಿಲ್ಲ. ವೇದಗಳಲ್ಲಿ ಅಡಗಿರುವ ಕ್ರಿಸ್ತ ಸಿಲುಬೆ ಯಜ್ಞವನ್ನು ಮರೆ ಮಾಡುವುದಕ್ಕೆ ಪೂರ್ವೋಕ್ತ ಪಂಡಿತರು ಒಂದು ವಿತಂಡ ವಾದವನ್ನು ಈ ಮಧ್ಯೆ ಪ್ರಚಾರ ಮಾಡುತ್ತಿದ್ದಾರೆ. ವೇದಕಾಲದ ಯಜ್ಞಗಳಲ್ಲಿ ಜಂತುರಕ್ತವನ್ನು ಸೋರಿಸುವ ಹಿಂಸಾತ್ಮಕ ವಿಧಾನ ಇಲ್ಲವೇ ಇಲ್ಲವೆಂದು ವೇದಕಾಲದ ಆರ್ಯರು ತಾವು

ಬೆಳೆಸಿದ ವ್ಯವಸಾಯ ಬೆಳೆಗಳನ್ನು, ಧಾನ್ಯವನ್ನು ದೇವತೆಗಳಿಗೆ ಅರ್ಪಿಸುವುದನ್ನೇ ಅವರು "ಯಜ್ಞ" ಎಂದು ಕರೆದಿದ್ದಾರೆಂದು ಅವರವಾದ.

ಆದರೆ ಇದೆಲ್ಲಾ ಅಸಲು ಸತ್ಯವನ್ನು ಮರೆಮಾಡುವುದಕ್ಕೆ ಕೆಲವರು ಮಾಡುತ್ತಿರುವ ವ್ಯರ್ಥಪ್ರಯತ್ನ, ವ್ಯರ್ಥ ಪ್ರಯಾಸ ಹೊರತು ಮತ್ತೇನಲ್ಲ. ಆರ್ಯರು ಸಸ್ಯದ್ರವ್ಯಗಳನ್ನು ದೇವತೆಗಳಿಗೆ ಅರ್ಪಿಸಿದ ಮಾತು ವಾಸ್ತವವೇ ಆದರೆ ಪಾಪ ಪರಿಹಾರಕ್ಕೋಸ್ಕರ ಮಾತ್ರ ಅವರು ಜಂತುರಕ್ತ ಪ್ರೋಕ್ಷಣವನ್ನು ನಡೆಸಿದ್ದಾರೆನ್ನುವುದಕ್ಕೆ ಖಚಿತವಾದ ಆಧಾರಗಳಿವೆ ಸಂದೇಹ ಇಲ್ಲ. "ರಕ್ತ ಚಿಂದಿಸದೆ ಪಾಪ ಕ್ಷಮಾಪಣೆ ಉಂಟಾಗುವುದಿಲ್ಲ" ಎಂದು ಪ್ರಾಚೀನ ಭಾರತೀಯ ವೇದಋಷಿಗಳು ನಂಬಿದ್ದಾರೆ. ( ಈ ವಿಷಯದಲ್ಲಿ ಸತ್ಯವನ್ನು ಪುರಾವೆಗಳಿಂದ ಸಹ ತಿಳಿದುಕೊಳ್ಳಲು ಕೋರುವವರು ನನ್ನನ್ನು ಸಂಪರ್ಕಿಸಬಹುದು.)

ದೇಶಭಕ್ತನಾದ ನಾನು, ಸನಾತನ ಹಿಂದೂ ಧರ್ಮವನ್ನು, ವೇದಗಳನ್ನು ಗೌರವಿಸುವ ನಾನು, ಸರ್ವಲೋಕ ಪಾಪ ಪರಿಹಾರಕ್ಕೋಸ್ಕರ ಯಜ್ಞವಾಗಿ ತಿರಿಗಿ ಎದ್ದ ಯೇಸುನನ್ನು ಬಿಟ್ಟುಬಿಡುವುದು ಹೇಗೆ ನ್ಯಾಯವಾಗುತ್ತದೊ ನನಗೆ ಅರ್ಥವಾಗುತ್ತಿಲ್ಲ! ಯಜ್ಞ ಅವಶ್ಯವಿಲ್ಲವೆಂದು ಈಗ ವಾದಿಸುವುದು, ವೇದಋಷಿ ಗಳನ್ನು ಹುಚ್ಚರ ಕೆಳಗೆ ಜಮಕಟ್ಟುವುದೇ ಆಗುತ್ತದೆ. ವೇದಕಾಲ ಹಿಂದೂಋಷಿಗಳ ಬಗ್ಗೆ ನನ್ನ ಹೃದಯದಲ್ಲಿ ಅಪಾರ ಗೌರವವನ್ನು ಬೆಳೆಸಿಕೊಂಡ ನಾನು ಯಜ್ಞಪುರುಷನಾದ ಯೇಸುಕ್ರಿಸ್ತನಲ್ಲಿ ನೇರವೇರಿದ "ಅಜಾಮೇಧಂ" ನಲ್ಲಿ ವಿಶ್ವಾಸವಿಡದೇ ತಪ್ಪುವುದಿಲ್ಲ – ನನ್ನ ವಿಶ್ವಾಸವನ್ನು ನನ್ನ ಸೋದರ ಭಾರತೀ ಯರಿಗೆ ಹೇಳದೇ ತಪ್ಪುವುದಿಲ್ಲ. ನನ್ನನ್ನು ಇನ್ನೇನು ಮಾಡೆನ್ನುತ್ತೀರಾ??

**ಸತ್ಯಮೇವ ಜಯತೇ ನಾನೃತಮ್ ಸತ್ಯ ಸಂಸ್ಥಾಪ ನಾಭಿಲಾಷಿ**

**ರಚನಕಾರರ ವಿಳಾಸ :– ಅದ್ದಂಕಿ ರಂಜಿತ್ ಓಫೀರ್ ಯಂ.ಐ.ಜಿ. 877, ಕೆ.ಪಿ.ಹೆಚ್.ಬಿ.ಕಾಲನೀ, ಹೈದರಾಬಾದ್–500 072 ಫೋನ್: 040–3058536**

**ಪ್ರಚುರಣೆ:– ಪಿ. ಸಂಗೀತ ರಾವ್ ಅದ್ದೇಪಲ್ಲಿ (ಪೋ), ಭಟ್ಟಿಪ್ರೋಲು (ಪೋಸ್ಟ್ / ಮಂ) ಗುಂಟೂರು (ಜಿಲ್ಲೆ), ಆಂಧ್ರಪ್ರದೇಶ್. ಪಿನ್‌ಕೋಡ್ : 522256.**

ಇದು ಓದಿದ ನಂತರ ಅರ್ಥವಾಗಿರುವುದೇನೆಂದರೆ ಮೊದಲು ಹಿಂದೂಮತದ ಮೇಲೆ ಅಭಿಮಾನವಾಗಿ ಪ್ರೇಮವನ್ನು ತೋರಿಸಿದ ವಿಧಾನ ಒಂದು ವ್ಯೂಹದ ಪ್ರಕಾರ ಹೇಳಿರುವುದು. ಕ್ರೈಸ್ತವಮತ ಪ್ರಚಾರದಲ್ಲಿನ ಭಾಗವೇ ಮೊದಲು ನಾನು ಪುನಃ ಹಿಂದೂ ಆಗಬೇಕೆಂದುಕೊಳ್ಳುವುದು. ಮೊದಲು ಹಿಂದೂಮತವನ್ನು ಬಿಟ್ಟು ಕ್ರೈಸ್ತವನಾಗಿ ಬದಲಾದಾಗಲೇ ಹಿಂದೂಮತದ ಮೇಲೆ ಇಲ್ಲದ ಅಭಿಮಾನ ನಂತರ ಬಂದಿದೆಯೆಂದು ಹೇಳುವುದು ಇತರರನ್ನು ಯಾಮಾರಿಸುವುದಕ್ಕೆಂದು ತಿಳಿಯುತ್ತಿದೆ. ಹಿಂದೂ ಮತದಲ್ಲಿನ ಜ್ಞಾನವನ್ನು ತಿಳಿಯದ ಸ್ವಾಮಿಗಳು ಕೆಲವರು ಮಾಡಿದ ಪ್ರಚಾರಗಳನ್ನು ಆಧಾರವಾಗಿ ಮಾಡಿಕೊಂಡು, ಅವುಗಳ ಬಲಹೀನತೆಯನ್ನು ಹೊರಗೆ ಹೇಳುತ್ತಾ, ಹಿಂದೂ ಮತವನ್ನೇ ಕೀಳಾಗಿನೋಡುವುದು ನಡೆದಿದೆ. ಹಿಂದೂಮತಕ್ಕೆ ಬುನಾದಿಯಂತವು ವೇದಗಳೆಂದು ಹೇಳುವುದು. ದಯಾನಂದ ಸರಸ್ವತಿ ಸಂದೇಶವನ್ನನುಸರಿಸಿ ವೇದ ಗ್ರಂಥಗಳು ಹೇಳಿದ ಮಾರ್ಗದಲ್ಲಿಯೇ ಪರಮಾತ್ಮನನ್ನು ಸೇರಿಕೊಳ್ಳಬೇ ಕೆಂದು ಹೇಳುವುದು, ಆ ಮಾತನ್ನು ಹೇಳಿದ ದಯಾನಂದ ಸರಸ್ವತಿಯನ್ನು ದೇಶದ್ರೋಹಿ ಎಂದಾಗಲಿ, ವಿದೇಶಿತೊತ್ತು ಎಂದಾಗಲಿ ಯಾರಾದರೂ ಅನ್ನಬಲ್ಲರಾ ಎಂದು ಹೇಳುವುದು ನೋಡಿದರೆ, ಹಿಂದೂಗಳ ಬೆರಳಿನಿಂದ ಹಿಂದೂಗಳ ಕಣ್ಣನ್ನೇ ಇರಿದಂತಿದೆ.

ಮಾನವರಿಗಿರುವ ಮೂರು ಗುಣಗಳ ವಿಷಯಗಳೇ ವೇದಗಳೆಂದು "ತ್ರೈಗುಣ್ಯ ವಿಷಯಾ ವೇದಾ" ಎನ್ನುವ ಭಗವದ್ಗೀತೆ ಮಾತಿಗೆ, ದಯಾನಂದ ಸರಸ್ವತಿ ವೇದಗಳೇ ದೇವರನ್ನು ತಿಳಿಸುವುದಕ್ಕೆ ಆಧಾರವೆಂದು ಹೇಳುವುದು ವಿರುದ್ಧ ಅಲ್ಲವೆ! ಗುಣ ವಿಷಯಗಳೇ ವೇದಗಳೆಂದು "ಗುಣಮಯಿ ಮಮ ಮಾಯಾ" ಗುಣಗಳೇ ಮಾಯೆ ಎಂದು, ಗುಣಗಳಿಂದ ಕೂಡಿರುವ ಮಾಯೆ ಯನ್ನು ದಾಟುವುದು ದುಸ್ಸಾಧ್ಯವೆಂದು, ಗುಣಗಳಿಂದ ಕೂಡಿದ ವೇದಗಳನ್ನು ಬಿಟ್ಟಾಗಲೇ ದೇವರನ್ನು ತಿಳಿಯಬಹುದೆಂದು, ಗೀತೆಯಲ್ಲಿ ದೇವರು ಹೇಳಿದಾಗ ವೇದಗಳು ಮುಖ್ಯವೆಂದು ದಯಾನಂದ ಸರಸ್ವತಿ ಹೇಗೆ ಹೇಳಬಲ್ಲನು.

ಒಂದುವೇಳೆ ಹೇಳಿದ್ದರೆ ಹಿಂದೂಮತದಲ್ಲಿನ ನಿಗೂಢವಾದ ಜ್ಞಾನ ಆತನಿಗೂ ಸಹ ತಿಳಿಯದೆಂದೇ ಹೇಳಬಹುದು.

ವೇದಗಳು ಪ್ರಪಂಚಕ್ಕೆ ಸಂಬಂಧಿಸಿರುವವು. ಅವುಗಳನ್ನು ಆಧಾರ ಮಾಡಿಕೊಂಡವರು ಮಾಯಾ ಪ್ರಪಂಚದಲ್ಲಿಯೇ ಇರಬಲ್ಲರು. ಆದರೆ ದೈವ ಸಂಬಂಧವಾದ ಮೋಕ್ಷವನ್ನು ಹೊಂದಲಾರರು. ವೇದಗಳನ್ನು ಹಿಡಿದುಕೊಂಡು ದೇವರನ್ನು ತಿಳಿದುಕೊಳ್ಳಬೇಕೆನ್ನುವುದು ನಾಯಿಬಾಲವನ್ನು ಹಿಡಿದುಕೊಂಡು ಗೋದಾವರಿ ಈಜಬಲ್ಲೆನೆಂದುಕೊಳ್ಳುವಂಥದ್ದೇ ಆಗುತ್ತದೆ. ವೇದ ಸಿದ್ಧಾಂತಗಳನ್ನು ಅನುಸರಿಸಿ ಮಾನವನು ಪರಮಾತ್ಮನನ್ನು ಸೇರುವುದಕ್ಕೆ ಪ್ರಾಣಿರಕ್ತ ಪ್ರೋಕ್ಷಣ ತಪ್ಪುವುದಿಲ್ಲ ಎಂದು ಅದ್ದಂಕಿ ರಂಜಿತ್ ಬರೆಯುವುದು ಹಾಸ್ಯಾಸ್ಪದ. ಕರ್ಮಯೋಗದಿಂದಾಗಲೀ, ಬ್ರಹ್ಮಯೋಗದಿಂದಾಗಲೀ ದೇವರು ತಿಳಿಯುತ್ತಾನೆಂದು ಬ್ರಹ್ಮವಿದ್ಯಾಶಾಸ್ತ್ರವಾದ ಗೀತೆಯಲ್ಲಿ ಹೇಳಿದ್ದಾರೆ ಹೊರತು, ಪ್ರಾಣಿ ರಕ್ತವನ್ನು ಸೋರಿಸುವುದರಿಂದ ಮನುಷ್ಯನಿಗೆ ದೇವರು ತಿಳಿಯುವುದಿಲ್ಲ. ಈ ಮಾತುಗಳು ದೈವಜ್ಞಾನದ ಬಗ್ಗೆ ತಿಳಿಯದವರು ಬರೆದಿರುವವಾಗಿ ಅರ್ಥವಾಗುತ್ತಿದೆ.

ಯಜ್ಞವನ್ನು ಕುರಿತು ಬರೆಯುತ್ತಾ ರಕ್ತದಿಂದ ಮಾಡಬೇಕೆಂದು ಬರೆದಿದ್ದಾರೆ. ಯಜ್ಞಗಳೆಂದರೇ ಇಲ್ಲಿಯವರೆಗು ಹಿಂದೂ ಸ್ವಾಮಿಗಳಿಗೇ ಸರಿಯಾಗಿ ಅರ್ಥವಾಗಲಿಲ್ಲ. ಅಂತಹ ಯಜ್ಞಗಳನ್ನು ಕುರಿತು ಇತರ ಮತಸ್ಥರು ಮಾತನಾಡುವುದು ನೆಲವಿಗೆ ಹತ್ತಲಾರದವಳು ಸ್ವರ್ಗಕ್ಕೆ ಹತ್ತುತ್ತಾಳಾ. ಯಜ್ಞಗಳು ಎರಡು ವಿಧಗಳೆಂದು ಅವು ಶರೀರದೊಳಗೆ ನಡೆಯುತ್ತಿವೆಯೆಂದು **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ನಾನು ಸಹ ಯೇಸುವನ್ನು ದೇವರಾಗಿ ಭಾವಿಸಿ ಆತನನ್ನು ಕುರಿತು ಆತನ ಬೋಧನೆಗಳನ್ನು ಕುರಿತು ಎಷ್ಟೋ ದೊಡ್ಡದಾಗಿ ಹೇಳುತ್ತಿರುವವನೇ. ಹಾಗಿದ್ದರೂ ನಾವು ಮತಕ್ಕೆ ಅತೀತವಾದ ದೇವರನ್ನು ಯೇಸುನಲ್ಲಿ ನೋಡಿದ್ದೇವೆ.

**'ಸರ್ವ ಪಾಪಪರಿಹಾರೋ ರಕ್ತಪ್ರೋಕ್ಷಣ ಮವಶ್ಯಕಮ್'** ಎಂದು ಒಂದುಮಾತನ್ನು ತೆಗೆದುಕೊಂಡು ನಮ್ಮ ಪಾಪ ಹೋಗುವುದಕ್ಕೆ ಪ್ರಭುವು ರಕ್ತವನ್ನು ಸೋರಿಸಿದ್ದಾನೆಂದು ಹೇಳುತ್ತಿದ್ದಾರೆ. ಪಾಪ ಹೋಗಬೇಕೆಂದರೆ ರಕ್ತ ಸೋರಬೇಕೆಂದು ಹೇಳಿದ್ದಾರಾಗಲಿ, ಇಂತಹವರ ರಕ್ತವೆಂದು ಆ ಶ್ಲೋಕ ಪದದಲ್ಲಿ ಇಲ್ಲವಲ್ಲ! ಪಾಪ ಅನುಭವಿಸಿದರೆ ಹೊರತು ಮುಗಿದುಹೋಗುವುದಿಲ್ಲ. ಆ ವಿಷಯವನ್ನು ನಾವು ತಿಳಿದುಕೊಳ್ಳುವುದಕ್ಕೆ ದೇವರು ಪ್ರತ್ಯಕ್ಷವಾಗಿ ತೋರಿಸುತ್ತಿದ್ದಾನೆ. ಉದಾಹರಣೆಗೆ ಒಬ್ಬನು ಬಸ್ಸು ಕೆಳಗೆಬಿದ್ದು ಗಾಯಗಳ ಪಾಲಾಗಿ ರಕ್ತ ಸೋರುವಾಗಾಗಲಿ, ಇತರ ಅಪಾಯಗಳು ನಡೆದಾಗಾಗಲಿ ಆತನನ್ನು ನಾವು ನೋಡಿದಾಗ ಪಾಪ! ಎಷ್ಟು ಕೆಲಸವಾಗಿದೆ ಎಂದು ನಾವು ಎನ್ನುತ್ತಿರುತ್ತೇವೆ. ಇಲ್ಲಿ ನಮಗೆ ತಿಳಿಯದೆಯೇ ಪಾಪ ಎಂದು ಹೇಳಲಾಗುತ್ತಿದೆ. ಇದನ್ನನುಸರಿಸಿ ಅವನು ರಕ್ತ ಸೋರಿಸುತ್ತಾ ದುಃಖಪಡುವುದು ಪಾಪದಿಂದಲೇ ಎಂದು, ದೇವರೇ ನಮ್ಮೊಳಗಿಂದಲೆ ಗುರುತು ಮಾಡಿದಂತಿದೆ. ಪಾಪ ಪರಿಹಾರ ಆಗಬೇಕೆಂದರೆ ಅದರ ಫಲಿತವಾದ ದುಃಖವನ್ನು ಅನುಭವಿಸಬೇಕಾಗಿದ್ದೇ. ಯಾರು ಬಾಧೆಪಟ್ಟರೆ ಅವನ ಪಾಪ ಮುಗಿದುಹೋಗುತ್ತದೆ. ಇದು ಶಾಸ್ತ್ರಬದ್ಧವಾದ ಸೂತ್ರ. ರಕ್ತವನ್ನು ಸೋರಿಸುವುದರಿಂದ ಪಾಪ ಹೋಗುತ್ತದೆ ಎಂದು ನಾವೂ ಸಹ ಒಪ್ಪಿಕೊಳ್ಳುತ್ತೇವೆ. ಆದರೆ ಯಾರನ್ನೋ ಸಾಯಿಸಿ ನಮ್ಮ ಪಾಪ ಹೋಗುತ್ತದೆಂದು ಅಂದುಕೊಳ್ಳುವುದು ತಪ್ಪು. ನಿನ್ನ ಪಾಪ ಹೋಗುತ್ತದೆಂದು ಇತರರನ್ನು ನೋಯಿಸಿದರೂ, ಅವರ ರಕ್ತವನ್ನು ಸೋರುವಂತೆ ಮಾಡಿದರೂ, ಹೊಸ ಪಾಪ ಬಂದು ಸೇರುತ್ತದಾಗಲಿ ಹಳೆಯದು ಹೋಗುವುದಿಲ್ಲ. ಪ್ರಭುವನ್ನು ಸಾಯಿಸಿ ಪಾಪವನ್ನು ಮೂಟೆಕಟ್ಟಿಕೊಂಡ ಕೈಪಾವಂತಹ ಗುರುಗಳು ಆತನ ಮರಣದಿಂದ ನಮ್ಮ ಪಾಪ ಹೋಗಿದೆಯೆಂದು ಮಾತನಾಡಿದ ಮಾತುಗಳನ್ನು ಈ ದಿನದ ಕೈಸ್ತವರು ಮಾತನಾಡುವುದು ಶೋಚನೀಯ.

ನಾವು ನಿತ್ಯ ಅನುಭವಿಸುತ್ತಿರುವ ಬಾಧೆಗಳು ಪಾಪ ಕಳಂಕಗಳು ಅಲ್ಲವೆ! ಪ್ರಭುವು ಮರಣದಿಂದ ನಮ್ಮ ಪಾಪಗಳು ಹೋಗಿದ್ದರೆ ಈ ದಿನ

ಯಾವ ಕ್ರೈಸ್ತವನಾದರು ಪಾಪ ಅನುಭವಿಸದೆ, ಬಾಧೆಪಡದಂತೆ, ರಕ್ತ ಸೋರದಂತೆ ಭೂಮಿ ಮೇಲೆ ಇದ್ದಾನಾ? ಪ್ರಭುವನ್ನು ಬಲವಂತವಾಗಿ ಸಾಯಿಸಿ, ಪಾಪ ಮೂಟೆಕಟ್ಟಿಕೊಂಡ ಮಾನವಾಳಿ, ಆತನ ಜ್ಞಾನದಿಂದ ಆ ಪಾಪವನ್ನು ಹೋಗಲಾಡಿಸಿಕೊಳ್ಳಬೇಕೇ ಹೊರತು ನನಗೆ ಪಾಪವೇ ಇಲ್ಲ ಎಂದುಕೊಳ್ಳುವುದು ತಪ್ಪು. ಪಾಪಪುಣ್ಯಗಳು ಕಣ್ಣಿಗೆ ಕಾಣಿಸುವವು ಅಲ್ಲ. ಕಾಣಿಸದಿರುವುದನ್ನು ಕುರಿತು ಹೋಗಿದೆ ಎಂದುಕೊಳ್ಳುವುದಕ್ಕಿಂತ ಇದೆಯೆಂದು ಪಾಪಭೀತಿಹೊಂದಿ ಪ್ರಭುವು ತಿಳಿಸಿದ ಜೀವಜಲ ಎನ್ನುವ ಜ್ಞಾನದಿಂದ ಪಾಪವನ್ನು ತೊಳೆದುಹಾಕಿಕೊಳ್ಳುವವನು ನಿಜವಾದ ಕ್ರೈಸ್ತವನೆಂದು ನಾವು ನಂಬುತ್ತಿದ್ದೇವೆ. ಹಾಗಲ್ಲದೆ ನಮ್ಮ ತಿಳುವಳಿಕೆಯನ್ನು ಮತ ಪ್ರಚಾರಕ್ಕೆ ವಿನಿಯೋಗಿಸುತ್ತಾ ಪ್ರಭುವು ಹೇಳಿದ ಮಾತುಗಳನ್ನು ವಕ್ರಮಾರ್ಗವನ್ನು ಹಿಡಿಸುವವನು ಎಂದಿಗೂ ಪ್ರಭುವಿನ ಭಕ್ತನು ಆಗಲಾರನು.

ಇದೆಲ್ಲವೂ ಗಮನಿಸಿದರೆ ದೈವ ಗ್ರಂಥವಾದ ಬೈಬಲ್‌ನಲ್ಲಿ ದೇವರು ವೇದಗಳು ದೊಡ್ಡವೆಂದು ಹೇಳಿದ್ದಾನಾ? ಇಲ್ಲ. ಅದರಲ್ಲಿ ವೇದಗಳ ಪ್ರಸಕ್ತಿಯೇ ಏಸು ಎಂದಿಗೂ ತರಲಿಲ್ಲ. ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ದೇವರು ನಾನು ವೇದಗಳಿಂದ ತಿಳಿಯಲ್ಪಡುತ್ತೇನೆಂದು ಹೇಳಿದ್ದಾನಾ? ಎಲ್ಲಿಯೂ ಹಾಗೆ ಹೇಳಲಿಲ್ಲ. ಮೇಲಾಗಿ ವೇದಗಳು ಗುಣಗಳ ಸಮ್ಮೇಳವೆಂದು ಸಾಂಖ್ಯ ಯೋಗ 45ನೇ ಶ್ಲೋಕದಲ್ಲಿ ಹೇಳಿದ್ದಾನೆ. ಅಷ್ಟೇ ಅಲ್ಲದೆ ವೇದಗಳೇ ನನ್ನ ಮಾಯೆಯೆಂದು ವಿಜ್ಞಾನಯೋಗದಲ್ಲಿ 14ನೇ ಶ್ಲೋಕದಲ್ಲಿ ಹೇಳಿದ್ದಾನೆ. ವಿಶ್ವರೂಪ ಸಂದರ್ಶನ ಯೋಗದಲ್ಲಿ 48 ಮತ್ತು 53ನೇ ಶ್ಲೋಕದಲ್ಲಿ ವೇದಗಳಿಂದ ನಾನು ತಿಳಿಯುವುದಿಲ್ಲವೆಂದು ಸ್ವತಃವಾಗಿ ದೇವರೇ ಹೇಳಿದ್ದಾನೆ. ಅಂತಹ ದೇವರ ಮಾತುಗಳನ್ನು ಅಲ್ಲವೆಂದು ದೈವ ಗ್ರಂಥಗಳಿಗೆ ವಿರುದ್ಧವಾಗಿ ಮಾತನಾಡುತ್ತಿದ್ದೇನೆಂಬ ಜ್ಞಾಪಕ ಸ್ವಲ್ಪವೂ ಇಲ್ಲದೇ ಹೇಳುವುದು ನಡೆಯುತ್ತಿದೆ. ಅಷ್ಟೇ ಅಲ್ಲದೆ ಮೊದಲು ಹೆಡ್ಡಿಂಗ್‌ನಲ್ಲಿ ಒಂದುಮಾತನ್ನು ತೋರಿಸಿ ಕೊನೆಗೆ ಬೇರೊಂದು ಉದ್ದೇಶವನ್ನು ತಿಳಿಸುವುದು ದೇವರ ಜ್ಞಾನದೊಂದಿಗೆ, ಮನುಷ್ಯರ

ಜೀವನದೊಂದಿಗೆ ಆಡಿಕೊಂಡಂತೆ ಅಲ್ಲವೇಯೆಂದು ಕೇಳುತ್ತಿದ್ದೇವೆ. ಅವರ ತಲೆಯಲ್ಲಿಯೇ ಸ್ಥಾನ ಏರ್ಪಡಿಸಿಕೊಂಡ ಮಾಯೆ ಅವರನ್ನು ದೇವರ ಜ್ಞಾನವನ್ನು ತಿಳಿದವರಾಗಿ, ಬೋಧಕರಾಗಿ ನಂಬಿಸಿ, ಮಾಯೆಯಿಂದ ಕೂಡಿಕೊಂಡಿವೆಯೆಂದು ಸ್ವತಃವಾಗಿ ದೇವರೇ ಹೇಳಿದ ವೇದಗಳನ್ನು, ಮಾಯೆ ಆತನ ಮೆದುಳಿಗೆ ಅಂಟಿಸಿದೆ. ಯಾವ ವೇದಗಳಾದರೇ ತನ್ನನ್ನು ತಿಳಿಸಲಾರವೆಂದು ಅಂದಿದ್ದಾನೋ, ಯಾವ ವೇದಗಳಿಂದ ನನ್ನನ್ನು ತಿಳಿದುಕೊಳ್ಳುವುದಕ್ಕೆ ಶಕ್ಯವಲ್ಲ ಎಂದು ಅಂದಿದ್ದಾನೋ, ಅದೇ ವೇದಗಳಲ್ಲಿ ಆತನ ಧ್ಯಾಸ ಇರುವುದನ್ನನುಸರಿಸಿ ಆತನು ದೇವರಿಗೆ ಬಹಳ ದೂರವಾಗಿ ಮಾಯೆಯಿಂದ ತಳ್ಳಿ ಹಾಕಲ್ಪಟ್ಟಿದ್ದಾನೆಂದು ತಿಳಿಯುತ್ತಿದೆ.

ಯೇಸುವನ್ನು ನಿಜವಾದ ದೇವರೆಂದು, ಬೈಬಲ್ ನಿಜವಾದ ದೈವ ಗ್ರಂಥವೆಂದು ನಂಬಿದ್ದೇನಲ್ಲ! ಅಂತಹ ನಾನು ದೇವರಿಗೆ ದೂರವಾಗಿ ಇರುವುದೇನು? ತನ್ನಮೇಲಿನ ಅಸೂಯೆಯಿಂದ ಬರೆದ ಬರಹಗಳೆಂದು ನಮ್ಮ ಮಾತನ್ನು ಸರಳವಾಗಿ ತೆಗೆದುಕೊಂಡರೂ ತೆಗೆದುಕೊಳ್ಳಬಹುದು. ದೇವರ ನಿಜತತ್ತ್ವವನ್ನು ತಿಳಿಯದೆ, ದೇವರನ್ನು ಹೊಗಳಿದಷ್ಟು ಮಾತ್ರಕ್ಕೆ, ಯಾರಿಷ್ಟಕ್ಕೆ ಅವರು ನಾವು ದೇವರಿಗೆ ಹತ್ತಿರವಾಗಿದ್ದೇವೆಂದು ಅಂದುಕೊಂಡಷ್ಟು ಮಾತ್ರಕ್ಕೆ, ಅಂತಹವರನ್ನು ದೇವರು ಒಪ್ಪಿಕೊಳ್ಳುವುದಿಲ್ಲ, ದೇವರ ಧರ್ಮಗಳೂ ಒಪ್ಪಿ ಕೊಳ್ಳುವುದಿಲ್ಲ. ದೈವ ನಿರ್ಮಿತವಾದ ಮಾಯೆ ಸಹ ಒಪ್ಪಿಕೊಳ್ಳುವುದಿಲ್ಲ. ಬೈಬಲ್ ಗ್ರಂಥದಲ್ಲಾಗಲಿ, ಯೇಸು ಜೀವನದಲ್ಲಾಗಲಿ ಎಲ್ಲಿಯೂ ಹೇಳದ ವೇದಗಳನ್ನು ಕುರಿತು ನಿಮಗೇಕೆ ಅಷ್ಟು ಪ್ರೇಮ ಎಂದು ಕೇಳುತ್ತಿದ್ದೇನೆ. ಯೇಸು ತನ್ನ ಕೊನೆಯ ಮಾತಾಗಿ ತಂದೆವೊಂದರ, ಕುಮಾರನೊಂದರ, ಪರಿಶುದ್ಧಾತ್ಮವೊಂದರ ನಾಮದೊಳಗೆ ಬೋಧಿಸುತ್ತಾ, ನಾನು ನಿಮಗೆ ಯಾವಯಾವ ಸಂಗತಿಗಳು ಆಜ್ಞಾಪಿಸಿದ್ದೇನೊ ಅವುಗಳನ್ನೇ ಬೋಧಿಸಬೇಕೆಂದು ಕೊನೆಯಲ್ಲಿ ಹೇಳಿಹೋದರೆ, ಆತನ ಮಾತನ್ನು ಅಲ್ಲವೆಂದು, ಆತನು ಹೇಳದ ಮಾತುಗಳಿಂದ ಮನುಷ್ಯರನ್ನು ಮೋಸಗೊಳಿಸುವುದು, ಜ್ಞಾನದ ಪ್ರಕಾರ ಒಳ್ಳೆಯದಾ? ಎಂದು ಕೇಳುತ್ತಿದ್ದೇನೆ.

ಯೇಸುನಲ್ಲಿ ವಿಶ್ವಾಸವಿಟ್ಟಿರುವ ಯಾವ ಕ್ರೈಸ್ತವನಾದರಾಗಲಿ, ತಾವು ಅನುಸರಿಸುತ್ತಿರುವ ಬೈಬಲ್ ಗ್ರಂಥದಲ್ಲಿನ ಜ್ಞಾನ ವಿಷಯಗಳನ್ನು ಮಾತನಾಡಬೇಕೆ ಹೊರತು, ವೇದಗಳನ್ನು ಕುರಿತು ಮಾತನಾಡುವುದು ಅವುಗಳನ್ನು ಹೊಗಳುವುದು ಬೈಬಲ್‌ಗೆ ವಿರುದ್ಧವಾಗುತ್ತದೆ. ಎರಡನೆಯ ದೈವ ಗ್ರಂಥವಾದ ಬೈಬಲ್‌ನಲ್ಲಿ ಇಲ್ಲದ ಜ್ಞಾನ ವಿಷಯಗಳು ವೇದಗಳಲ್ಲಿ ಇವೆಯಾ? ಯೇಸು ಪ್ರಭುವು ಹೇಳದ ವಿಷಯಗಳನ್ನು ದಯಾನಂದ ಸರಸ್ವತಿ ಹೇಳಿದ್ದಾನಾ? ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ವೇದಾಧ್ಯಯನದಿಂದ ನನ್ನನ್ನು ತಿಳಿಯುವುದಕ್ಕೆ ಶಕ್ಯವಾಗುವು ದಿಲ್ಲವೆಂದು ದೇವರು ಹೇಳಿದರೇ, ದೇವರ ಮಾತನ್ನು ಅಲ್ಲವೆಂದು, ದಯಾನಂದ ಸರಸ್ವತಿ ಹೇಳಿದ್ದಾನೆಂದು, ವೇದಗಳನ್ನು ಕುರಿತು ಹೇಳಿಕೊಳ್ಳುವು ದರಿಂದ, ದೇವರನ್ನು ದೇವರ ಮಾತನ್ನು ಅವಮಾನಪಡಿಸಿ ದಂತೆಯೇ ಆಗುತ್ತಿದೆ. ದೇವರ ಮಾತಿಗಿಂತ ಒಬ್ಬ ಮನುಷ್ಯನು ಹೇಳಿದ ಮಾತೇ ದೊಡ್ಡದಾಗಿ ಹೇಗೆ ಕಾಣಿಸಿದೆಯೊ ನಮಗೆ ಅರ್ಥವಾಗಲಿಲ್ಲ. ಈ ವಿಷಯಗಳೆಲ್ಲ ಗ್ರಹಿಸಿದ ನಾವು ದೇವರ ಜ್ಞಾನಕ್ಕೆ ಗೌರವ (ಬೆಲೆ) ಬೆಳೆಯುವಂತೆ ಮಾಡುವುದಕ್ಕೆ ಇತರರು ಬರೆದ ವಾಕ್ಯಗಳನ್ನು ನಿಮಗೆ ತಿಳಿಸಿ, ಅವುಗಳಲ್ಲಿನ ಅಸತ್ಯವನ್ನು ಖಂಡಿಸಿ ವಾಸ್ತವ ಜ್ಞಾನವನ್ನು ತಿಳಿಸಬೇಕೆಂದು ಅಂದುಕೊಂಡಿದ್ದೇವೆ. ಆ ನೇತೃತ್ವದಲ್ಲಿ ಈಗ ಅದ್ದಂಕಿ ರಂಜಿತ್ ಕುಮಾರ್‌ರವರು ರಚಿಸಿದ "ಹೈಂದವ ಕ್ರೈಸ್ತವ" ಎನ್ನುವ ಪುಸ್ತಕದಲ್ಲಿ 4ನೇ ಪೇಜಿನಲ್ಲಿ ಒಂದು ವಾಕ್ಯವನ್ನು ಇಲ್ಲಿ ವಿಶ್ಲೇಷಿಸಿ ನೋಡೋಣ.

**"ಪ್ರಧಾನವಾಗಿ ವೇದವು ಸೃಷ್ಠಿಕರ್ತನನ್ನು ಕುರಿತೇ ಮಾತನಾಡುತ್ತದೆ. ದೇವರನ್ನು ಸೇರುವ ಮಾರ್ಗವನ್ನು ಹೇಳುವುದಿಲ್ಲ ಎನ್ನುವುದು ವೇದಗಳನ್ನು ಅವಮಾನಿಸುವುದೇ ಆಗುತ್ತದೆ."**

ವೇದಗಳನ್ನು ಅವಮಾನಿಸಬೇಕೆಂಬುದು ನಮಗೇನಾದರೂ ಕೋರಿಕೆಯಾ? ನಾವು ಸತ್ಯವನ್ನು ಮಾತನಾಡುತ್ತಿದ್ದೇವೆ. ಅಸತ್ಯವನ್ನು ಖಂಡಿಸುತ್ತಿದ್ದೇವೆ. ಆ ಕೆಲಸದಲ್ಲಿ ತಪ್ಪನ್ನು ತಪ್ಪಾಗಿ, ಸರಿಯಾದುದನ್ನು ಸರಿಯೆಂದು ಹೇಳುವುದು ಪ್ರಪಂಚದ ಪ್ರಕಾರ ನ್ಯಾಯ. ದೈವಜ್ಞಾನದ ಪ್ರಕಾರ ಧರ್ಮ. ನಾವು ಸುಮ್ಮನೆ ಯಾವುದನ್ನು ಖಂಡಿಸುತ್ತಿಲ್ಲ. ಶಾಸ್ತ್ರಬದ್ಧತೆಯನ್ನು ಅನುಸರಿಸಿ ಖಂಡಿಸಿ ಹೇಳಬೇಕಾಗಿದೆ. ದೇವರಿಗೆ ಸಂಬಂಧಿಸಿದ ಶಾಸ್ತ್ರ ಬ್ರಹ್ಮವಿದ್ಯಾಶಾಸ್ತ್ರ. ಅದನ್ನು ಧರ್ಮಶಾಸ್ತ್ರ ಎಂದು ಸಹ ಎನ್ನುತ್ತಾರೆ. ಬ್ರಹ್ಮವಿದ್ಯಾಶಾಸ್ತ್ರವನ್ನು ಉಪಯೋಗಿಸಿ ಪ್ರಪಂಚದಲ್ಲಿನ ಅನೇಕ ವಾಕ್ಯಗಳನ್ನು ಯಾವುದು ದೈವಿಕ ವಾದುದು, ಯಾವುದು ದೈವಿಕ ಅಲ್ಲದಿರುವುದೋ ನಿರ್ಣಯಿಸಿ ಹೇಳಬಹುದು. ಅಯಸ್ಕಾಂತವನ್ನು ಹಿಡಿದುಕೊಂಡು ಲೋಹಗಳನ್ನು ತಾಕಿದಾಗ ಯಾವುದು ಕಬ್ಬಿಣವೊ, ಯಾವುದು ಬಂಗಾರವೊ ಹೊರಬೀಳುತ್ತದೆ. ಅಲ್ಲಿಯವರೆಗು ಬಂಗಾರದ ಬಣ್ಣವನ್ನು ಬಳಿದುಕೊಂಡ ಕಬ್ಬಿಣವನ್ನು ಸಹ ನಾವು ಬಂಗಾರವೆಂದು ಅಂದುಕೊಳ್ಳುವ ಅವಕಾಶವಿದೆ. ಈ ದಿನ ಭೂಮಿಮೇಲೆ ಎಷ್ಟೋ ಜನ ಎಷ್ಟೋ ಮಾತುಗಳನ್ನು ದೈವ ಸಂಬಂಧವಾದವೆಂದು ಹೇಳುತ್ತಿದ್ದಾರೆ. ಹಾಗೆಯೇ ಎಷ್ಟೋ ಜನ ದೈವ ಸಂಬಂಧ ವಿಷಯಗಳೆಂದು ಎಷ್ಟೋ ಗ್ರಂಥಗಳನ್ನು ಬರೆದಿದ್ದಾರೆ. ಅವುಗಳೆಲ್ಲವನ್ನು ಅಲ್ಲವೆಂದಾಗಲಿ, ಹೌದು ಎಂದಾಗಲಿ ಎನ್ನುವುದಕ್ಕೆ ಒಂದು ಆಧಾರವಿರಬೇಕು. ಆಧಾರವಿಲ್ಲದೇ ಏನನ್ನು ಖಂಡಿಸಲಾರೆವು, ಹಾಗೆಯೇ ಸಮರ್ಥಿಸಲೂ ಆಗುವುದಿಲ್ಲ. ಯಾವ ವಿಧವಾಗಿ ಅಯಸ್ಕಾಂತವನ್ನು ಉಪಯೋಗಿಸಿ ಒಂದೇ ಬಣ್ಣವಿರುವ ಬಂಗಾರವನ್ನು ಕಬ್ಬಿಣವನ್ನು ಬೇರೆಮಾಡಿ ಕಂಡುಕೊಳ್ಳುತ್ತಿದ್ದೇವೊ, ಶಾಸ್ತ್ರವನ್ನು ಉಪಯೋಗಿಸಿ ಅಸಲನ್ನು ನಕಲಿಯನ್ನು, ಸತ್ಯವನ್ನು ಅಸತ್ಯವನ್ನು, ಧರ್ಮವನ್ನು ಅಧರ್ಮವನ್ನು ಗುರುತಿಸಬಹುದು. ಪ್ರಪಂಚ ವಿಷಯಗಳನ್ನು ತಿಳಿಸುವುದಕ್ಕೆ ಐದು ಶಾಸ್ತ್ರಗಳಿರುವಾಗ, ಕೇವಲ ದೇವರ ವಿಷಯಗಳಲ್ಲಿ ಸತ್ಯಾಸತ್ಯಗಳನ್ನು ತೀರ್ಮಾನಿಸಿ ಹೇಳುವುದು ಬ್ರಹ್ಮವಿದ್ಯಾ ಶಾಸ್ತ್ರ ಎಂದು ಹೇಳಬಹುದು. ಅದನ್ನೇ ಕೆಲವರು ಧರ್ಮಶಾಸ್ತ್ರವೆಂದು ಸಹ ಹೇಳುತ್ತಿರುತ್ತಾರೆ.

ಭೂಮಿಮೇಲೆ ಯಾವ ಮನುಷ್ಯ ಹೇಳಿದ ವಾಕ್ಯವಾಗಲಿ, ಇಲ್ಲವೆ ಯಾವ ಗ್ರಂಥದಲ್ಲಿನ ಬರಹವಾಗಲಿ ಅದು ದೈವಿಕವಾದುದಾ ಅಲ್ಲವಾ ಎನ್ನುವ ಸತ್ಯವನ್ನು ತಿಳಿಯುವುದಕ್ಕೆ ನಮಗೆ ಧರ್ಮಶಾಸ್ತ್ರ (ಬ್ರಹ್ಮವಿದ್ಯಾಶಾಸ್ತ್ರ) ಅಗತ್ಯ. ಮೊದಲು ಅಯಸ್ಕಾಂತ ಇಂಥದೆಂದು ತಿಳಿಯಲ್ಪಟ್ಟಾಗ, ಅದನ್ನು ಉಪಯೋಗಿಸಿ ಕಬ್ಬಿಣವನ್ನು ಆಕರ್ಷಿಸಬಹುದು. ಹಾಗೆಯೇ ಮೊದಲು ಶಾಸ್ತ್ರಗಳೆಂದರೆ ಏನು? ಅದರಲ್ಲಿ ಧರ್ಮಶಾಸ್ತ್ರ ಯಾವುದು? ಎಂದು ತಿಳಿದಾಗ ಅದನ್ನು ಉಪಯೋಗಿಸಿ ಗ್ರಂಥದಲ್ಲಿನ ವಾಕ್ಯವನ್ನಾಗಲಿ, ಮನುಷ್ಯರು ಹೇಳಿದ ವಾಕ್ಯವನ್ನಾಗಲಿ ದೈವಿಕ ಸಂಬಂಧವಾದುದಾ, ಪ್ರಕೃತಿ ಸಂಬಂಧವಾದುದಾ ಎಂದು ತೀರ್ಮಾನಿಸಿ ಹೇಳಬಹುದು. ಸಮಾಜವನ್ನು ಅಸಲಾದ ದೇವರಕಡೆ ನಡೆಸುವುದಕ್ಕೆ ಕೆಲವು ವಾಕ್ಯಗಳನ್ನಾಗಲಿ, ಕೆಲವರ ಮಾತುಗಳನ್ನಾಗಲಿ, ತಪ್ಪದೆ ಶಾಸ್ತ್ರವನ್ನು ಉಪಯೋಗಿಸಿ ನೋಡಿ ಸರಿಯಾದುದಾದರೆ, ಸಮರ್ಥಿಸಿ ಪ್ರಜೆಗಳಿಗೆ ಕೊಡಬೇಕು. ಸರಿಯಾದುದು ಅಲ್ಲದಿದ್ದರೆ, ಖಂಡಿಸಿ ಅದು ತಪ್ಪೆಂದು ಹೇಳಿ ಪ್ರಜೆಗಳನ್ನು ಮೋಸಹೋಗದಂತೆ ನೋಡಬೇಕು. ಈ ಕಾರ್ಯವು ಸ್ವಲ್ಪ ಕಷ್ಟವಾದುದಾದರೂ, ದೇವರ ಮಾರ್ಗವನ್ನು ಸರಳ ಮಾಡುವುದಕ್ಕೆ ಕೈಲಾದವರು ಮಾಡಬೇಕಾದ ಕೆಲಸವೆಂದು ತಿಳಿಯಬೇಕು. ಹಾಗೆ ಮಾಡುವುದರಿಂದ ಜ್ಞಾನರೂಪದಲ್ಲಿ ಬೆರಕೆಯಾದ ಏನನ್ನಾದರೂ ತೆಗೆದುಹಾಕಿ ಪ್ರಜೆಗಳಿಗೆ ಸ್ವಚ್ಛವಾದ ಜ್ಞಾನವನ್ನು ತಿಳಿಸಬಹುದು. ಪ್ರಪಂಚದಲ್ಲಿ ಎಲ್ಲಾ ಕಾರ್ಯಗಳಿಗೆಲ್ಲಾ ಜ್ಞಾನಮಾರ್ಗವನ್ನು ಸರಳ ಮಾಡಿ, ಯಾವ ಆತಂಕಗಳು ಇಲ್ಲದ ಹಾಗೆ ನೋಡಿ, ಅವುಗಳಿಂದ ಅಡ್ಡದಾರಿ ಹಿಡಿಯದ ಹಾಗೆ ಮಾಡುವುದು ಅತ್ಯಂತ ಉನ್ನತವಾದ ಕಾರ್ಯವಾಗುತ್ತದೆ. ಅಂತಹ ಉನ್ನತ ಕಾರ್ಯವನ್ನು ಮಾಡುವುದಕ್ಕೆ ಮೊದಲು ನಾವು ಪ್ರಪಂಚದಲ್ಲಿರುವ ಷಟ್ ಶಾಸ್ತ್ರಗಳಲ್ಲಿ ಧರ್ಮಶಾಸ್ತ್ರ ಯಾವುದೋ ಮೊದಲು ತಿಳಿದುಕೊಳ್ಳೋಣ.

ಧರ್ಮಶಾಸ್ತ್ರ ದೇವರಿಗೆ ಹೊರತು ಯಾವ ಮನುಷ್ಯರಿಗೂ ತಿಳಿಯದು. ಆದ ಕಾರಣ ದೇವರಿಂದ ಹೇಳಲಾಗಿರುವುದೇ ಧರ್ಮಶಾಸ್ತ್ರವಾಗುತ್ತದೆ. ದೇವರು ಹೊರತು ಮನುಷ್ಯರು ಹೇಳಿರುವುದು ಧರ್ಮಶಾಸ್ತ್ರ ಅಲ್ಲ. ದೇವರು ಪ್ರತ್ಯಕ್ಷವಾಗಿ

ಅಲ್ಲದೆ ಪರೋಕ್ಷವಾಗಿ ಹೇಳಿರುವ ಮೂರು ಗ್ರಂಥಗಳು ಭೂಮಿಮೇಲೆ ಇವೆ. ಆ ಮೂರನ್ನು ದೈವ ಗ್ರಂಥಗಳು ಎನ್ನುತ್ತಿದ್ದೇವೆ. ಆ ಮೂರು ದೈವ ಗ್ರಂಥಗಳಲ್ಲಿ ಧರ್ಮಶಾಸ್ತ್ರ ಸಂಪೂರ್ಣವಾಗಿ ಇದೆ. ಧರ್ಮಶಾಸ್ತ್ರವನ್ನು ಅನುಸರಿಸಿ ದೇವರು ಮೂರು ಗ್ರಂಥಗಳನ್ನು ತಯಾರು ಮಾಡಿ ಮನುಷ್ಯರಿಗೆ ಕೊಟ್ಟಿದ್ದಾನೆ. ಆ ಮೂರು ಗ್ರಂಥಗಳನ್ನೇ ಪ್ರಥಮ ದೈವ ಗ್ರಂಥವೆಂದು ಮೊದಲನೆಯದನ್ನು, ದ್ವಿತಿಯ ದೈವ ಗ್ರಂಥವೆಂದು ಎರಡನೆಯದನ್ನು, ಅಂತಿಮ ದೈವ ಗ್ರಂಥವೆಂದು ಮೂರನೆಯದನ್ನು ಎನ್ನುತ್ತಿದ್ದೇವೆ. ಪ್ರಥಮ ದೈವ ಗ್ರಂಥವಾಗಿ ಭಗವದ್ಗೀತೆ, ದ್ವಿತಿಯ ದೈವ ಗ್ರಂಥವಾಗಿ ಬೈಬಲ್, ಅಂತಿಮ ದೈವ ಗ್ರಂಥವಾಗಿ ಖುರ್‌ಆನ್ ಗ್ರಂಥಗಳು ಇವೆ. ದೇವರ ವಿಷಯದಲ್ಲಿ ಯಾವುದು ಸತ್ಯವೊ, ಯಾವುದು ಮಿಥ್ಯವೊ, ಯಾವುದು ಧರ್ಮವೊ, ಯಾವುದು ಧರ್ಮ ಅಲ್ಲವೊ ತೀರ್ಮಾನಿಸಿ ಹೇಳುವವು ಈ ಮೂರು ಗ್ರಂಥಗಳೇ ಎಂದು ತಿಳಿಯಬೇಕು. ಈಗ ಅಸಲು ವಿಷಯಕ್ಕೆ ಬಂದು ನೋಡೋಣ. ಮೇಲೆ ವೇದಗಳಿಗೆ ಸಂಬಂಧಿಸಿದ ವಾಕ್ಯವನ್ನು ಹೇಳಿಕೊಂಡು, ಅದು ದೇವರಿಗೆ ಸಂಬಂಧಿಸಿರುವುದಾ ಅಥವಾ ಮಾಯೆಗೆ ಸಂಬಂಧಿಸಿರುವುದಾ ಎಂದು ನೋಡುವುದಕ್ಕೆ ಧರ್ಮಶಾಸ್ತ್ರವನ್ನು ವಿನಿಯೋಗಿಸಿಕೊಳ್ಳೋಣ. ಇತರರು ವೇದಕ್ಕೆ ಸಂಬಂಧಿಸಿದ ಆ ವಾಕ್ಯ ದೇವರಿಗೆ ಸಂಬಂಧಿಸಿರುವುದೆಂದು, ಯಾರಾದರೂ ದೇವರಿಗೆ ಸಂಬಂಧಿಸಿರುವುದು ಅಲ್ಲವೆಂದರೆ ವೇದಗಳನ್ನು ಅವಮಾನಮಾಡಿದಂತೆ ಎಂದು ಹೇಳಿದ್ದಾರೆ. ಆದ್ದರಿಂದ ಅವರು ಹೇಳಿದ ಮಾತನ್ನು ಮೂರು ದೈವ ಶಾಸ್ತ್ರಗಳನ್ನು ಅನುಸರಿಸಿ ನೋಡಿದರೆ, ಬೈಬಲ್ ಗ್ರಂಥದಲ್ಲಿ ವೇದಗಳ ಪ್ರಸಕ್ತಿಯೇ ಇಲ್ಲ. ಹಾಗೆಯೇ ಖುರ್‌ಆನ್ ಗ್ರಂಥದಲ್ಲಿ ಸಹ ವೇದಗಳ ಪ್ರಸ್ತಾವನೆ ಬರಲಿಲ್ಲ. ಇನ್ನೂ ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಮಾತ್ರ ವೇದಗಳನ್ನು ಕುರಿತು ಹೇಳುವುದು ನಡೆದಿದೆ.

ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ 45ನೇ ಶ್ಲೋಕದಲ್ಲಿ "ತ್ರೈಗುಣ್ಯ ವಿಷಯಾ ವೇದಾ" ಎಂದು ಒಂದುಕಡೆ, ವಿಜ್ಞಾನಯೋಗದಲ್ಲಿ 14ನೇ ಶ್ಲೋಕದಲ್ಲಿ

"ಗುಣಮಯಿ ಮಮ ಮಾಯಾ ದುರತ್ಯಯಾ" ಎಂದು ಒಂದುಕಡೆ, ಹಾಗೆಯೇ ವಿಶ್ವರೂಪ ಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿ ಮತ್ತು 53ನೇ ಶ್ಲೋಕದಲ್ಲಿ ವೇದಗಳನ್ನು ಕುರಿತು ಹೇಳುವುದು ನಡೆದಿದೆ.

**ಶ್ಲೋ ॥ 48. ನವೇದ ಯಜ್ಞಾಧ್ಯಯನೈರ್ನ ದಾನೈರ್ನ ಚಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂ ರೂಪ ಶ್ಯಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರು ಪ್ರವೀರ॥**

**ಭಾವಾರ್ಥ :–** ಅರ್ಜುನಾ! ಭೂಮಿಮೇಲೆ ನೀನು ಹೊರತು ಈ ರೂಪವನ್ನು ನೋಡಿದವರು ಯಾರೂ ಇಲ್ಲ. ಯಜ್ಞಗಳಿಂದಾಗಲಿ, ವೇದಗಳಿಂದಾಗಲಿ, ದಾನಗಳಿಂದಾಗಲಿ, ತಪಸ್ಸುಗಳಿಂದಾಗಲಿ ನನ್ನನ್ನು ನೋಡುವುದಕ್ಕೆ ಯಾರಿಗೂ ಸಾಧ್ಯವಾಗಲಿಲ್ಲ.

**ಶ್ಲೋ ॥ 53. ನಾಹಂ ವೇದೈರ್ನ ತಪಸಾ ನದಾನೇನ ನಚೇಜ್ಯಯಾ ।**
**ಶಕ್ಯ ಏವಂ ವಿಧೋದ್ರಷ್ಟುಂ ದೃಷ್ಟ ವಾನಸಿ ಮಾಂ ಯಥಾ ॥**

**ಭಾವಾರ್ಥ :–** ತಪಸ್ಸುಗಳಿಂದಾಗಲಿ, ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ, ವೇದಾಧ್ಯಯನಗಳಿಂದಾಗಲಿ ಈಗ ನೀನು ನೋಡಿದ ಈ ರೂಪವನ್ನು ನೋಡುವುದಕ್ಕೆ ಸಾಧ್ಯವಾಗುವುದಿಲ್ಲ.

ಸಾಂಖ್ಯಯೋಗದಲ್ಲಿ ವೇದಗಳಲ್ಲಿ ಮೂರು ಗುಣಗಳ ವಿಷಯಗಳೇ ಇವೆಯೆಂದು 45ನೇ ಶ್ಲೋಕದಲ್ಲಿ ಹೇಳಿದ ಭಗವಂತನು, ವಿಜ್ಞಾನಯೋಗದಲ್ಲಿ ಗುಣಗಳಿಂದ ಕೂಡಿಕೊಂಡ ನನ್ನ ಮಾಯೆಯನ್ನು ಜಯಿಸುವುದು ದುಸ್ಸಾಧ್ಯವೆಂದು 14ನೇ ಶ್ಲೋಕದಲ್ಲಿ ಹೇಳಿದ್ದಾನೆ. ನಂತರ ವಿಶ್ವರೂಪ ಸಂದರ್ಶನ ಯೋಗದಲ್ಲಿ 48, 53ನೇ ಶ್ಲೋಕಗಳಲ್ಲಿ ಯಜ್ಞಗಳಿಂದಾಗಲೀ, ವೇದಗಳಿಂದಾಗಲೀ, ತಪಸ್ಸುಗಳಿಂದಾಗಲೀ, ದಾನಗಳಿಂದಾಗಲೀ ನನ್ನನ್ನು ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲ ಎಂದು ಹೇಳಿದ್ದಾನೆ. ಭಗವಂತನು ಹೇಳಿದ ಮಾತುಗಳನ್ನನುಸರಿಸಿ ಪ್ರಕೃತಿಯಿಂದ ಹುಟ್ಟಿದ ಗುಣಗಳ ವಿಷಯಗಳೇ ವೇದಗಳಲ್ಲಿ ಇವೆಯೆಂದು, ಗುಣಗಳನ್ನೇ ಮಾಯೆ ಎನ್ನುತ್ತಿದ್ದಾರೆಂದು ಹೇಳಿದ್ದಾನೆ. ಆಗ

ವೇದಗಳು ಮಾಯೆಯಿಂದ ಕೂಡಿಕೊಂಡಿರುವುದೆಂದು ಪ್ರತ್ಯೇಕವಾಗಿ ಹೇಳದೇನೆ ಹೇಳಿದಂತಿದೆ. ಇದೆಲ್ಲವು ಗಮನಿಸಿದರೆ ಧರ್ಮಶಾಸ್ತ್ರವಾದ ಭಗವದ್ಗೀತೆ ಗ್ರಂಥ ವೇದಗಳಿಂದ ಮಾನವನನ್ನು ದೂರವಾಗಿರು ಎಂದು ಹೇಳುತ್ತಿರುವ ಹಾಗೆ ತಿಳಿಯುತ್ತಿದೆ. ಮತ್ತು ವೇದಗಳಿಂದ ದೇವರು ಎಂದಿಗೂ ತಿಳಿಯನೆಂದು ವಿಶ್ವರೂಪ ಸಂದರ್ಶನಯೋಗದಲ್ಲಿ ತಿಳಿದುಹೋಗಿದೆ.

ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆಯಲ್ಲಿ, ವೇದಗಳನ್ನು ಕುರಿತು ಸ್ವತಃವಾಗಿ ಭಗವಂತನೇ ಇವುಗಳಿಂದ ನಾನು ತಿಳಿಯುವುದಿಲ್ಲ ಎಂದು ಹೇಳಿದಾಗ ಆ ಮಾತನ್ನು ಬಿಟ್ಟು, ಮಾನವನಾದ ದಯಾನಂದ ಸರಸ್ವತಿಯೋ, ಪ್ರೇಮಾನಂದ ಬೃಹಸ್ಪತಿಯೋ ಹೇಳಿದ ಮಾತುಗಳನ್ನು ಏಕೆ ಪರಿಗಣನೆಗೆ ತೆಗೆದುಕೊಳ್ಳಬೇಕು? ಭಗವದ್ಗೀತೆ ಭೂಮಿಮೇಲೆ ಮೊಟ್ಟಮೊದಲು ತಿಳಿದ ಧರ್ಮಶಾಸ್ತ್ರ. ಧರ್ಮ ಶಾಸ್ತ್ರದಲ್ಲಿನ ದೇವರ ಮಾತನ್ನು ಬಿಟ್ಟು, ವೇದಗಳನ್ನು ಕುರಿತು ದೊಡ್ಡದಾಗಿ ಹೇಳಬೇಕಾದ ಅಗತ್ಯ ಏನು ಬಂದಿದೆಯೆಂದು ನಾವು ಪ್ರಶ್ನಿಸುತ್ತಿದ್ದೇವೆ. ಭೂಮಿಮೇಲೆ ಸ್ವಾಮಿಗಳು, ಗುರುಗಳು, ಭಗವಾನರು ಎಂದು ಹೆಸರು ಇಟ್ಟುಕೊಂಡವರೆಲ್ಲರೂ ನಿಜವಾಗಲು ಗುರುಗಳು ಅಲ್ಲ, ಭಗವಂತರು ಅಲ್ಲ. ಅಂತಹವರ ಮಾತುಗಳನ್ನು ಕೇಳಿ ತಪ್ಪುದಾರಿ ಹಿಡಿಯಬೇಕಾದ ಅವಶ್ಯಕತೆ ಇಲ್ಲ. ವೇದಗಳು, ಪುರಾಣಗಳು, ಓದಿದವರಿಗೆ ಭಗವದ್ಗೀತೆಯಲ್ಲಿ ವೇದಗಳನ್ನು ಕುರಿತು ಹೇಳಿದ ವಿಷಯ ತಿಳಿಯದಂತೆ ಇರುತ್ತದಾ? ಬಹುಶಃ ತಿಳಿದೇ ಇರುತ್ತದೆ. ಈಗ ಮತ್ತೊಂದು ವಾಕ್ಯವನ್ನು ನೋಡೋಣ. "ಹೈಂದವ ಕ್ರೈಸ್ತವ" ಎನ್ನುವ ಪುಸ್ತಕದಲ್ಲಿ 5ನೇ ಪೇಜಿನಲ್ಲಿ ಈ ವಿಧವಾಗಿ ಬರೆಯಲಾಗಿದೆ.

**"ವೇದಗಳು ಕರುಣಾಮಯನಾದ ಪರಾತ್ಪರನು ಮಾನವರೆಲ್ಲರಿಗೂ ಪ್ರಸಾದಿಸಿದ ಮೊದಲ ಜ್ಞಾನದೀಪ"**

ಈ ವಾಕ್ಯವನ್ನನುಸರಿಸಿ ವೇದಗಳನ್ನು ದೇವರೇ ಸೃಷ್ಟಿಸಿದ್ದಾನೆಂದು ಎಲ್ಲರಿಗೂ ಅರ್ಥವಾಗುತ್ತದೆ. ಆದರೆ ಈ ಮಾತು ಸುಳ್ಳಾ ಅಥವಾ ನಿಜವಾ

ಎಂದು ಯೋಚಿಸಿ, ಆಲೋಚಿಸಿ ನೋಡೋಣ. ವೇದಗಳನ್ನು, ಪುರಾಣಗಳನ್ನು ದೇವರು ಬರೆಯಬೇಕಾದ ಅಗತ್ಯವಿಲ್ಲ. ವೇದಗಳು ಗುಣಗಳಿಂದ ಕೂಡಿಕೊಂಡಿರುವವು, ಆದ್ದರಿಂದ ಗುಣಗಳಿರುವ ಮನುಷ್ಯರೇ ಅವುಗಳನ್ನು ಬರೆಯುತ್ತಾರೆ. ದೇವರು ಗುಣಗಳು ಇಲ್ಲದವನು, ಆದ್ದರಿಂದ ದೇವರನ್ನು ಗುಣಾತೀತನು ಎಂದು ಅನ್ನುತ್ತಾರೆ. ಜೀವಿಯಾದವನು ತಲೆಯಲ್ಲಿನ ಗುಣಚಕ್ರದಲ್ಲಿ ಹನ್ನೆರಡು ಗುಣಗಳಲ್ಲಿ ಸಿಲುಕಿಕೊಂಡಿದ್ದಾನೆ. ದೇವರು ಜೀವಿಯಂತೆ ಗುಣಗಳಲ್ಲಿ ಇಲ್ಲ. ಆದ್ದರಿಂದ ಆತನು ಗುಣಾತೀತನು. ಗುಣಾತೀತನಾದ ದೇವರನ್ನು ಮೇಲಿನ ವಾಕ್ಯದಲ್ಲಿ ಕರುಣಾಮಯನು ಎಂದು ಸಂಬೋಧಿಸಿ ಹೇಳಿದ್ದಾನೆ. ಯಾವ ಗುಣದೊಂದಿಗೆ ಸಂಬಂಧ ಇಲ್ಲದವನನ್ನು ಒಂದು ಗುಣದಿಂದ ಮುಡಿಹಾಕಿ ಕರುಣಾಮಯನು ಎನ್ನುವುದು ದೇವರನ್ನು ಹೊಗಳಿದಹಾಗಾ, ಇಲ್ಲವೆ ಹೇಳನೆ ಮಾಡಿದಹಾಗಾ ನೀವೇ ಆಲೋಚಿಸಿರಿ. ಗುಮಸ್ತಾ ಸ್ಥಾನದಲ್ಲಿ ಯಜಮಾನನನ್ನು ಕೂರಿಸುವುದರಿಂದ ಯಜಮಾನನನ್ನು ಅವಮಾನಿಸಿದಂತೆ ಅಲ್ಲವೆ! ಯಜಮಾನನ ಸ್ಥಾನ ದೊಡ್ಡದು, ಗುಮಸ್ತಾ ಸ್ಥಾನ ಚಿಕ್ಕದಾಗಿರುತ್ತದೆ. ಅಂತಹದರಲ್ಲಿ ಯಜಮಾನನನ್ನು ಗುಮಸ್ತಾ ಸ್ಥಾನದಲ್ಲಿ ಇಡುವುದರಿಂದ ಯಜಮಾನನ್ನು ಗುಮಸ್ತಾ ಸ್ಥಾನಕ್ಕೆ ಇಳಿಜಾರಿಸಿದಂತಾಗುತ್ತದೆ. ಆದ್ದರಿಂದ ಜ್ಞಾನ ತಿಳಿದವನು ಯಾರಾದರೂ ದೇವರನ್ನು ಕರುಣಾಮಯನು, ದಯಾಮಯನು ಎಂದು ಅನ್ನುವುದಿಲ್ಲ.

ಮೇಲಿನ ವಾಕ್ಯದಲ್ಲಿ ದೇವರನ್ನು ಕರುಣಾಮಯನು ಎಂದು ಹೇಳುವುದೇ ದೊಡ್ಡ ತಪ್ಪು. ಅಲ್ಲಿಗೆ ಸುಮ್ಮನಾಗದೆ ವೇದಗಳನ್ನು ದೇವರೇ ಮಾನವರಿಗೆ ಕೊಟ್ಟಿದ್ದಾನೆ ಅನ್ನುವುದು ಮತ್ತಷ್ಟ ದೊಡ್ಡತಪ್ಪು. ತನ್ನ ಧರ್ಮಗಳನ್ನು ದೇವರು ಪ್ರತ್ಯಕ್ಷವಾಗಿ ಯಾರಿಗೂ ಹೇಳಲಿಲ್ಲ. ಪರೋಕ್ಷವಾಗಿ ಹೇಳಿದ್ದಾನೆ. ತನ್ನ ಧರ್ಮಗಳನ್ನು ತನಗೆ ಹೊರತು ಯಾವ ಮಾನವನಿಗು ತಿಳಿಯದು. ಆದ್ದರಿಂದ ತನ್ನ ಧರ್ಮಗಳನ್ನು ಪ್ರತ್ಯಕ್ಷವಾಗಿ ಅಲ್ಲದೆ ಪರೋಕ್ಷವಾಗಿ ಮನುಷ್ಯರಿಗೆ ಹೇಳಿದ್ದಾನೆ. ಪ್ರತ್ಯಕ್ಷವಾಗಿ ಹೇಳಿದರೆ ದೇವರು ಯಾರಾಗಿರುವುದು, ಹೇಗಿರುವುದು ಮನುಷ್ಯನಿಗೆ ತಿಳಿದುಹೋಗುತ್ತದೆ. ದೇವರು ಹೇಗಿರುವುದು ಯಾರಿಗು ತಿಳಿಯಬಾರದು.

ಆದ್ದರಿಂದ ಆತನು ಪ್ರತ್ಯಕ್ಷವಾಗಿ ಹೇಳದೆ ಪರೋಕ್ಷವಾಗಿ ಹೇಳಿದ್ದಾನೆ. ಆದ್ದರಿಂದ ಪ್ರಪಂಚದಲ್ಲಿ ದೇವರನ್ನು ಇಲ್ಲಿಯವರೆಗು ಯಾರೂ ನೋಡಲಿಲ್ಲವೆಂದು ಹೇಳಬಹುದು. ಪೂರ್ತಿ ರಹಸ್ಯವಾಗಿರುವ ದೇವರು ಗುಣಗಳಿಂದ ಕೂಡಿಕೊಂಡ ವೇದಗಳನ್ನು ಹೇಳಿದ್ದಾನೆಂದರೆ! ಕಾಡಿನಲ್ಲಿನ ಹುಲಿಬಂದು ನಮ್ಮ ಹಿತ್ತಲಲ್ಲಿನ ಹಸು ಹತ್ತಿರ ಹಾಲು ಕುಡಿದುಹೋಗಿದೆಯೆಂದು ಹೇಳಿದಂತಿರುತ್ತದೆ. ಹುಲಿಬಂದು ಹಸುವಿನ ಕೆಚ್ಚಲಿನಲ್ಲಿನ ಹಾಲನ್ನು ಕುಡಿದುಹೋಗಿದೆಯೆಂಬುದು ಎಷ್ಟು ಅಸತ್ಯವೋ, ದೇವರು ವೇದಗಳನ್ನು ಹೇಳಿದ್ದಾನೆಂಬುವುದು ಅಷ್ಟೇ ಅಸತ್ಯ ವಾಗುತ್ತದೆ.

ಕೆಲವರು ಮಹರ್ಷಿಗಳು ಬರೆದ ವಿಷಯಗಳೆಲ್ಲವನ್ನು ದ್ವಾಪರಯುಗದಲ್ಲಿ ವ್ಯಾಸಮಹರ್ಷಿ, ಜಮಮಾಡಿ, ಅವುಗಳಿಗೆ ಜೊತೆಯಾಗಿ ತಾನು ಸಹ ಸ್ವಲ್ಪ ಬರೆದು ಸೇರಿಸಿದ ಗ್ರಂಥಗಳೇ ವೇದಗಳು. ವೇದಗಳು ನಾಲ್ಕು ಗ್ರಂಥಗಳಾಗಿ ನಾಲ್ಕು ಹೆಸರುಗಳಲ್ಲಿ ಇವೆ. ನಾಲ್ಕು ವೇದಗಳನ್ನು ಜೊತೆಮಾಡಿ, ಬರೆದು ನಾಲ್ಕು ಗ್ರಂಥಗಳಾಗಿ ಮಾಡಿದವನು ವ್ಯಾಸನು. ವೇದಗಳನ್ನು ಮನುಷ್ಯರಿಗೆ ಪರಿಚಯ ಮಾಡಿದ ವ್ಯಕ್ತಿ ವ್ಯಾಸನು. ವೇದಗಳನ್ನು ತಿಳಿಸಿದವನು ವ್ಯಾಸನು ಎಂದು ಶಾಶ್ವತವಾಗಿ ತಿಳಿಯುವ ಹಾಗೆ, ಅಲ್ಲಿಯವರೆಗು ವ್ಯಾಸನಾಗಿ ಕರೆಯಲ್ಪಡುವ ಆತನನ್ನು ಆಗಿನಿಂದ ವೇದವ್ಯಾಸನು ಎಂದು ಎಲ್ಲರೂ ಅನ್ನುವುದು ಪ್ರಾರಂಭಮಾಡಿದರು. ವೇದಗಳ ರಚನಕಾರ ಮತ್ತು ಗ್ರಂಥಕರ್ತ ವೇದವ್ಯಾಸನು. ವೇದಗಳನ್ನು ಗ್ರಂಥರೂಪವಾಗಿ ಪ್ರಜೆಗಳಿಗೆ ಪರಿಚಯ ಮಾಡಿದ ನಂತರ ವ್ಯಾಸನು ಹದಿನೆಂಟು ಪುರಾಣಗಳನ್ನು ಸಹ ಬರೆಯುವುದು ನಡೆದಿದೆ. ಈ ವಿಧವಾಗಿ ಚತುರ್ ವೇದಗಳನ್ನೂ, ಅಷ್ಟಾದಶ ಪುರಾಣಗಳನ್ನು ವ್ಯಾಸನು ಬರೆದಿದ್ದಾನೆಂದು ಬಹಳಜನರಿಗೆ ತಿಳಿಯದೆ ಹೋದರೂ, ಕೆಲವರಿಗಾದರೂ ತಿಳಿದಿದೆ. ಕೆಲವರಿಗೆ ತಿಳಿಯದ ಮಾತ್ರಕ್ಕೆ ವ್ಯಾಸನನ್ನು ಪಕ್ಕಕ್ಕಿಟ್ಟು, ದೇವರೇ ವೇದಗಳ ರಚನಕಾರ ಎನ್ನುವುದು ಪೂರ್ತಿ ಅಸತ್ಯ. ದೇವರು ಸೃಷ್ಟಿ ಆದಿಯಲ್ಲಿಯೇ ತನ್ನ ಧರ್ಮಶಾಸ್ತ್ರವನ್ನು ತಿಳಿಸಿದ್ದಾನೆ. ದ್ವಾಪರಯುಗದ

ಕೊನೆಯಲ್ಲಿ ವೇದವ್ಯಾಸನಿಂದ ವೇದಗಳು ಹೊರಗೆ ಹೇಳಲಾಗಿವೆ. ಆದ್ದರಿಂದ ಮೇಲಿನ ವಾಕ್ಯದಲ್ಲಿ ದೇವರು ವೇದಗಳನ್ನು ಮಾನವರಿಗೆ ಕೊಟ್ಟಿದ್ದಾನೆ ಎನ್ನುವುದು ಪೂರ್ತಿ ತಪ್ಪು. ಈಗ "ಹೈಂದವ ಕ್ರೈಸ್ತವ" ಎನ್ನುವ ಪುಸ್ತಕದಲ್ಲಿ ಆರನೆಯ ಪುಟದಲ್ಲಿರುವ ಒಂದು ವಾಕ್ಯವನ್ನು ತೆಗೆದುಕೊಂಡು ನೋಡೋಣ.

**"ಸನಾತನ ಧರ್ಮಕ್ಕೆ ಮೂಲ ವೇದಗಳೇ, ವೇದ ಹೇಳಿರುವುದೇನೊ ಕೇಳುವವರೆಗು ಪ್ರಜೆಗಳಿಗೆ ಸನಾತನ ಧರ್ಮ ಎಂದರೆ ಏನೋ ತಿಳಿಯದು."**

ಮನೆಯಲ್ಲಿ ಬೆಳೆದ ಮೊಲಕ್ಕೆ ಅರಣ್ಯದಲ್ಲಿ ತಿರುಗುವ ಹುಲಿ ವಿಷಯ ಗೊತ್ತು. ಆದ್ದರಿಂದ ಹುಲಿ ಸಮಾಚಾರ ಯಾರಿಗಾದರೂ ಬೇಕೆಂದರೆ, ನಮ್ಮ ಮನೆಯಲ್ಲಿನ ಮೊಲವೇ ಗತಿ ಎನ್ನುವ ಹಾಗೆ, ಹುಲಿಯಂತಹ ಸನಾತನ ಧರ್ಮಗಳನ್ನು ತಿಳಿಯಬೇಕೆಂದರೆ, ಮನೆ ಮೊಲದಂತಹ ವೇದಗಳೇ ಆಧಾರವೆಂದು ರಂಜಿತ್ ಹೇಳಿದ ಮಾತನ್ನು ಕೇಳಿ ವೇದಗಳ ಮೇಲೆ ಆತನಿಗಿರುವ ಪ್ರೇಮ ಎಂತಹದ್ದೊ ಅರ್ಥವಾಗಿದೆ. ವಯಸ್ಸಿನಲ್ಲಿ ನಾನು ತಂದೆಯಂತಹವನು, ಆತನು ಕುಮಾರನಂತಹವನು. ನಮ್ಮ ಮನೆಯಲ್ಲಿ ನನ್ನ ಕುಮಾರನು ಒಂದು ವಿಷಯದಲ್ಲಿ ತಿಳಿಯದೆ ಏನಾದರೂ ತಪ್ಪು ನಿರ್ಣಯವನ್ನು ತೆಗೆದುಕೊಂಡರೆ, ಮನೆಯಲ್ಲಿ ದೊಡ್ಡವನಾದ ನಾನು ಅದು ಒಳ್ಳೆಯ ನಿರ್ಣಯವಲ್ಲ, ಅದರಿಂದ ನೀನು ಹೆಚ್ಚಾಗಿ ನಷ್ಟಹೋಗುತ್ತೀಯಾ ಎಂದು ತಪ್ಪದೆ ಹೇಳಿ, ಆ ನಿರ್ಣಯದಿಂದ ತಪ್ಪಿಸಿ, ಒಳ್ಳೆಯ ನಿರ್ಣಯವನ್ನು ತೆಗೆದುಕೊಳ್ಳುವ ಹಾಗೆ ನೋಡುತ್ತೇವೆ. ಈಗ ಯಾರೋ ಕ್ರೈಸ್ತವನು ಬರೆದುಕೊಂಡಿದ್ದಾನೆ ನನಗೇಕೆ ಎಂದು ನಾನು ಅಂದುಕೊಳ್ಳುತ್ತಿಲ್ಲ. ಮನೆಯಲ್ಲಿ ನನ್ನ ಮಗು ತಪ್ಪು ಮಾಡಿದರೆ ಸರಿಮಾಡಿ ಹೇಳುವುದು ನನ್ನ ಜವಾಬ್ಧಾರಿಯಾದಂತೆ, ದೇವರ ರಾಜ್ಯದಲ್ಲಿ ಏಕ ಕುಟುಂಬವಾಗಿರುವ ನಾವು, ಒಬ್ಬರ ತಪ್ಪನ್ನು ಮತ್ತೊಬ್ಬರು ಬಿಚ್ಚಿ ಹೇಳಿಕೊಂಡು ತಪ್ಪನ್ನು ಸರಿಮಾಡಿಕೊಳ್ಳುವುದು ನಮ್ಮ ಕರ್ತವ್ಯ. ಈಗ ಅದೇ ದೃಷ್ಟಿಯಿಂದಲೇ

ಅದ್ದಂಕಿ ರಂಜಿತ್‌ರವರಿಗೆ ನಿನ್ನ ನಿರ್ಣಯ ತಪ್ಪು. ವೇದಗಳ ಮಾಯೆಯಲ್ಲಿ ಬೀಳಬೇಡವೆಂದು ಹೇಳುತ್ತಿದ್ದೇನೆ.

ವೇದಗಳ ಬಲೆಯಲ್ಲಿ ಬಿದ್ದು ಹಿಂದೂ ಮತದಲ್ಲಿ ಇಲ್ಲಿಯವರೆಗು ಯಾರೂ ದೇವರನ್ನು ಸೇರಲಿಲ್ಲ. ದೇವರ ಮೇಲೆ ಇಷ್ಟ, ವಿಶ್ವಾಸವಿದ್ದರೆ ದೇವರುಕೊಟ್ಟ ಬೈಬಲ್ ಗ್ರಂಥವನ್ನು ಆಶ್ರಯಿಸು, ಅದನ್ನೇ ಹೇಳು, ಅದನ್ನೇ ಹೊಗಳು. ಮನುಷ್ಯ ಆಧ್ಯಾತ್ಮಿಕ ಮಾರ್ಗದಲ್ಲಿ ಪ್ರಯಾಣಿಸುವುದಕ್ಕೆ ದೇವರೇ ಮಾರ್ಗವನ್ನು ಏರ್ಪಡಿಸಿ ಭಾರತದೇಶದಲ್ಲಿ ಭಗವದ್ಗೀತೆಯನ್ನು, ಇಸ್ರಾಯೇಲ್ ದೇಶದಲ್ಲಿ ಬೈಬಲ್ ಮತ್ತು ಖುರ್‌ಆನ್ ಗ್ರಂಥಗಳನ್ನು ದೇವರೇ ಮಾನವರಿಗೆ ತಿಳಿಸಿದ್ದಾನೆ. ದೇವರ ಮಾರ್ಗದಲ್ಲಿ ಮೂರು ಗ್ರಂಥಗಳು ಸಮಾನವೇ ಆದರೂ, ಈದಿನ ಕ್ರೈಸ್ತವರೆಲ್ಲರೂ ಬೈಬಲ್ ಗ್ರಂಥವನ್ನು ತಮ್ಮ ಗ್ರಂಥವಾಗಿ ಹೇಳಿ ಕೊಳ್ಳುತ್ತಿದ್ದಾರೆ. ಒಬ್ಬ ಮನುಷ್ಯ ಮೂರು ದೈವ ಗ್ರಂಥಗಳಲ್ಲಿ ಯಾವುದನ್ನು ಆಶ್ರಯಿಸಿದರೂ, ಅದರಲ್ಲಿ ದೇವರ ಜ್ಞಾನವೇ ತಿಳಿಯುತ್ತದೆ. ಆದ್ದರಿಂದ ವಜ್ರದಂತಹ ಬೈಬಲ್ ಇರುವಾಗ, ಅದನ್ನು ಬಿಟ್ಟು ಮೋಟುಕಲ್ಲಿನಂತಹ ವೇದಗಳನ್ನು ಕುರಿತು ರಂಜಿತ್ ಏಕೆ ಹೇಳುತ್ತಿದ್ದಾನೊ ನಮಗೆ ಅರ್ಥವಾಗಲಿಲ್ಲ. ಆದರೂ ನಾವು ಹೇಳಬೇಕೆಂದಿರುವುದು ಏನೆಂದರೆ!

ಬೈಬಲ್ ಗ್ರಂಥದಲ್ಲಿ ದೇವರ ವಿಷಯಗಳು ಸಂಪೂರ್ಣವಾಗಿ ಇವೆ. ಬೈಬಲ್ ಗ್ರಂಥದ ಮುಂದೆ ವೇದಗಳು ಮೃಷ್ಟಾನ್ನ ಭೋಜನದಲ್ಲಿ ಕೇವಲ ಉಪ್ಪಿನಕಾಯಿಗಳಂತವು. ಅನ್ನತಿಂದರೆ ಹೊಟ್ಟೆ ತುಂಬುತ್ತದಾಗಲಿ, ಉಪ್ಪಿನಕಾಯನ್ನು ಎಷ್ಟು ತಿಂದರು ಹೊಟ್ಟೆ ಉರಿ ಬಿಟ್ಟರೆ ಹಸಿವು ತೀರದು. ಹಾಗೆಯೇ ವೇದಗಳನ್ನು ಎಷ್ಟು ಹೇಳಿಕೊಂಡರೂ, ಅವುಗಳಿಂದ ಪ್ರಪಂಚದಲ್ಲಿ ಸಿಲುಕಿಕೊಳ್ಳುವುದೆ ಹೊರತು ದೇವರಿಗೆ ಹತ್ತಿರ ಆಗಲಾರರು. ಬೈಬಲ್ ಗ್ರಂಥದಲ್ಲಿ ಮತ್ತಾಯ, ಮಾರ್ಕ, ಲೂಕಾ, ಯೋಹಾನ್ ಸುವಾರ್ತೆಗಳು ನಾಲ್ಕು ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿಸಿವೆ. ಒಂದು ಯೋಹಾನು ಸುವಾರ್ತೆಯಲ್ಲಿ ಮನುಷ್ಯ ತನ್ನ ಮೆದುಳಿಗೆ ಎಷ್ಟು ಅರ್ಥ ಮಾಡಿಕೊಳ್ಳುತ್ತಾನೋ ಅಷ್ಟು ಜ್ಞಾನವನ್ನು

ದೇವರು ಒದಗಿಸಿದ್ದಾನೆ. ಯೋಹಾನ್ ಸುವಾರ್ತೆಯಲ್ಲಿನ ವಾಕ್ಯಗಳು ಮನುಷ್ಯನನ್ನು ಕದಲಿಸಿ ಕಣ್ಣೀರನ್ನು ಸುರಿಸುವ ಆನಂದವನ್ನು ಒದಗಿಸುತ್ತಿರುವಾಗ, ಅದನ್ನು ದೊಡ್ಡದಾಗಿ ಹೇಳಿಕೊಳ್ಳದೆ ಈರುಳ್ಳಿ ವಾಸನೆಗೆ ಕಣ್ಣು ಉರಿದು ಕಣ್ಣೀರು ಸುರಿದರೆ ಅವುಗಳನ್ನೇ ಆನಂದಭಾಷ್ಪಗಳು ಎನ್ನುವುದು ಹೇಗೆ ಸರಿ ಅಲ್ಲವೋ, ವೇದಗಳನ್ನು ಕುರಿತು ಹೊಗಳಿ ಹೇಳಿಕೊಳ್ಳುವುದು ಅಷ್ಟೇ ಸಮಂಜಸವಾಗುತ್ತದೆ. ದೇವರು ಮಾರುವೇಷದಲ್ಲಿ ಯೇಸು ಎನ್ನುವ ಹೆಸರಿನಿಂದ ಭೂಮಿಮೇಲೆ ಬಂದು, ತನಗೆ ಹೊರತು ಯಾರಿಗು ತಿಳಿಯದ ಜ್ಞಾನವನ್ನು ಮೂರು ವರ್ಷಗಳು ಊರೂರು ತಿರುಗಿ ಪ್ರಜೆಗಳಿಗೆ ತಿಳಿಸಿದ್ದಾನೆ. ಆ ದಿನ ತನಗಂತೂ ಒಂದು ನಿವಾಸ ಏರ್ಪಡಿಸಿಕೊಳ್ಳದೆ, ಮೂವತ್ತುಮೂರು ವರ್ಷಗಳು ಇಜ್ರಾಯೇಲ್ ದೇಶದಲ್ಲಿದ್ದು, ಮೂರು ವರ್ಷಗಳು ಜ್ಞಾನವನ್ನು ಬೋಧಿಸಿ, ಮೂವತ್ತುಮೂರು ಗಂಟೆಗಳು ಮೃತಿಹೊಂದಿ ಮತ್ತೆ ಬದುಕಿ, ಮೂವತ್ತುಮೂರು ಸಲ ಶಿಷ್ಯರಿಗೆ ಕಾಣಿಸಿ, ಕೊನೆಯ ಭೇಟಿಯಲ್ಲಿ ತಂದೆ, ಕುಮಾರನು, ಪರಿಶುದ್ಧಾತ್ಮ ಎಂದು ಹೇಳಿ ಬೋಧಕರಾಗಿರುವ ಮೂವರನ್ನು ಕುರಿತೇ ಬಾಪ್ತಿಸ್ಮ ಕೊಟ್ಟು, ತಾನು ಹೇಳಿದ ಸಮಾಚಾರವನ್ನೇ ಬೋಧಿಸೆಂದು ಹೇಳಿದಾಗ, ಈಕಡೆ ಬೋಧಿಸುವವರು ತಂದೆ, ಕುಮಾರನು, ಪರಿಶುದ್ಧಾತ್ಮ ಯಾರೋ ಹೇಳುತ್ತಿಲ್ಲ. ಆಕಡೆ ತಿಳಿದು ಕೊಳ್ಳುವವರೂ ಆ ಮೂವರನ್ನು ಕುರಿತು ಕೇಳುತ್ತಿಲ್ಲ. ಆತನು ಕೊನೆಯಲ್ಲಿ ಹೇಳಿದ ಎಷ್ಟೋ ಉತ್ತಮ ಜ್ಞಾನವನ್ನಾಗಲಿ, ಮೊದಲು ಹೇಳಿದ ಯೊಹಾನ್ ಸುವಾರ್ತೆಯಲ್ಲಿನ ಜ್ಞಾನವನ್ನಾಗಲಿ, ಎಷ್ಟೋ ಅದ್ಭುತ ಆಶ್ಚರ್ಯವನ್ನು ಉಂಟುಮಾಡುವು ದಾಗಿರುವಾಗ, ಅದನ್ನು ಬಿಟ್ಟು ವೇದಗಳನ್ನು ಹೇಳಿಕೊಳ್ಳುವುದು ದೊಡ್ಡ ತಪ್ಪು. ಮನುಷ್ಯನಾದ ನಂತರ ಯಾರಾದರೂ ದೇವರ ವಿಷಯದಲ್ಲಿ ತಪ್ಪು ಮಾಡಬಹುದು. ಆದರೂ ಅದನ್ನು ಆಲೋಚಿಸಿ ಸರಿಮಾಡಿಕೊಳ್ಳುವುದಕ್ಕೆ ದೇವರು ಪ್ರತಿ ಮನುಷ್ಯನಿಗೆ ಬುದ್ಧಿಯನ್ನು ಸಹ ಕೊಟ್ಟಿದ್ದಾನೆ. ಆದ್ದರಿಂದ ಯಾರಾದರೂ ತಮ್ಮ ತಪ್ಪನ್ನು ಸರಿಮಾಡಿಕೊಳ್ಳುವುದಕ್ಕೆ ಅವಕಾಶವಿದೆ. ಪ್ರಪಂಚ ವಿಷಯದಲ್ಲಿ ತಪ್ಪು ಮಾಡಿದರೂ ಪರವಾಗಿಲ್ಲ. ದೇವರ ವಿಷಯದಲ್ಲಿ ತಪ್ಪು ಮಾಡಬಾರದು. ನಾವು ಮತವನ್ನಾಗಲಿ, ಮತದ್ವೇಷವನ್ನಾಗಲಿ ಮನಸ್ಸಿನಲ್ಲಿ

ಇಟ್ಟುಕೊಂಡು ಯಾರನ್ನು ವಿಮರ್ಶಿಸುತ್ತಿಲ್ಲ. ಕ್ರೈಸ್ತವರಾದವರು ಬೈಬಲ್‌ನಲ್ಲಿಯೇ ಜ್ಞಾನವನ್ನು ಹುಡುಕಲು ಹೇಳುತ್ತಿದ್ದೇವೆ. ಹಾಗೆಯೇ ಯಾವ ಮತದವರು ಆ ಮತಕ್ಕೆ ಅಭ್ಯಾಸವಾದ ಗ್ರಂಥದಿಂದಲೇ ಜ್ಞಾನವನ್ನು ತಿಳಿದುಕೊಳ್ಳಿರೆಂದು ಹೇಳುತ್ತಿದ್ದೇವೆ. ಹಿಂದೂಗಳು ಭಗವದ್ಗೀತೆಯನ್ನು, ಮುಸ್ಲೀಮ್‌ರು ಖುರ್‌ಆನ್ ಗ್ರಂಥವನ್ನು ನೋಡೆಂದು, ಅದರಲ್ಲಿನ ದೇವರ ಜ್ಞಾನವನ್ನು ತಿಳಿದುಕೊಳ್ಳಿ ಎಂದು ಹೇಳುತ್ತಿದ್ದೇವೆ. ನಮ್ಮ ದೃಷ್ಠಿಯಲ್ಲಿ ಎಲ್ಲಾ ಮತಗಳಾಗಲಿ, ಅವರ ಗ್ರಂಥಗಳಾಗಲಿ ಸಮಾನವೇ. ಸತ್ಯವನ್ನೇ ಬೋಧಿಸುತ್ತಿದ್ದೇವೆ ಹೊರತು ಮತವನ್ನು ಬೋಧಿಸುತ್ತಿಲ್ಲ. ನಾನು ಹಿಂದೂಗಳ ಕುಟುಂಬದಲ್ಲಿ ಹುಟ್ಟಿದ್ದಕ್ಕೆ ಹಿಂದೂವೇ ಎಂದು ಹೇಳಬೇಕಾಗಿ ಬಂದರೂ, ನಾನು ಹಿಂದೂವೇ (ಇಂದೂ) ಆದರೂ ಹಿಂದೂಗಳು ದೊಡ್ಡದಾಗಿ ಹೇಳಿಕೊಳ್ಳುವ ವೇದಗಳನ್ನು ಖಂಡಿಸುತ್ತಿದ್ದೇನೆ ಅಲ್ಲವೆ! ದೇವರೇ ಖಂಡಿಸಿದ್ದಾನೆಂದು ಹೇಳುತ್ತಿದ್ದೇವಲ್ಲವೆ! ಇದನ್ನನುಸರಿಸಿ ನಮಗೆ ಮತ ಮುಖ್ಯವಲ್ಲ, ಸತ್ಯ ಮುಖ್ಯವೆಂದು ಆ ವಿಧವಾಗಿಯೇ ಮಾತ ನಾಡುತ್ತಿರುತ್ತೇವೆಂದು ತಿಳಿಯಬೇಕು.

ಸನಾತನ ಧರ್ಮವೆಂದರೆ ಆದಿಯಿಂದ ಇರುವ ಧರ್ಮವೆಂದು ಅರ್ಥ. ಆದಿಯಲ್ಲಿ ಆಕಾಶ ಶಬ್ಧದ ಮೂಲಕ ದೇವರು ತಿಳಿಸಿದ ಜ್ಞಾನವೇ ಸನಾತನ ಧರ್ಮವಾಗಿ ಹೇಳಲ್ಪಡುತ್ತಿದೆ. ಅದನ್ನೇ ಕೃಷ್ಣನು ಹೇಳಿದ್ದಾನೆ. ಅದನ್ನೇ ಏಸು ಹೇಳಿದ್ದಾನೆ. ಅದನ್ನೇ ಜಿಬ್ರಯೇಲ್ ಹೇಳಿದ್ದಾನೆ. ಆದಿಯಲ್ಲಿ ಹೇಳಿದ ಧರ್ಮವನ್ನು ನಮಗೆ ತಿಳಿದಿರುವುದರಲ್ಲಿ ಕೃಷ್ಣನು, ಯೇಸು, ಜಿಬ್ರಯೇಲ್ ಮೂವರು ಹೇಳಿರುವಾಗ, ಆಚರಿಸಿದವರಲ್ಲಿ ಮುಖ್ಯವಾಗಿ ರಾವಣಬ್ರಹ್ಮ ಇದ್ದಾನೆಂದು ಹೇಳಬಹುದು. ಈ ವಿಧವಾಗಿ ಸೃಷ್ಟಿ ಆದಿಯಿಂದ ಎಂದಿಗೂ ಬದಲಾಗದಿರುವ ಧರ್ಮವನ್ನೇ ಸನಾತನ ಧರ್ಮ ಎನ್ನುತ್ತಿದ್ದೇವೆ. ಅಷ್ಟು ಬಿಟ್ಟರೆ ಸನಾತನ ಧರ್ಮವೆಂಬುದು ಪ್ರತ್ಯೇಕಿಸಿ ಒಂದು ಮತಕ್ಕೆ ಸಂಬಂಧಿಸಿರುವುದು ಅಲ್ಲ. ದೇವರು ಹೇಳಿರುವುದೇ ಸನಾತನ ಧರ್ಮ. ಅದು ಇಂದಿಗೂ ಮೂರು ದೈವ ಗ್ರಂಥಗಳಲ್ಲಿಯೂ ಯಾವ ಬದಲಾವಣೆ ಇಲ್ಲದ ಹಾಗೆ ಇದೆ. ಆದ್ದರಿಂದ

ಸನಾತನ ಧರ್ಮಗಳಿಗೆ ಮೂಲ ಮೂರು ದೈವ ಗ್ರಂಥಗಳೇ ಎಂದು ಹೇಳಬಹುದು. ಅಷ್ಟೇ ಹೊರತು ವೇದಗಳು ಧರ್ಮಗಳಿಗೆ ಮೂಲವಲ್ಲ.

ಈಗ ರಂಜಿತ್‌ರವರ "ಹೈಂದವ ಕ್ರೈಸ್ತವರು" ಎಂಬ ಗ್ರಂಥದಿಂದ ಮತ್ತೊಂದು ವಿಷಯವನ್ನು ಸ್ವೀಕರಿಸಿ, ಅದರಲ್ಲಿನ ಸತ್ಯಾಸತ್ಯಗಳನ್ನು ತಿಳಿದುಕೊಳ್ಳೋಣ. ಮೊದಲ ಮಾತಿನಲ್ಲಿನ ಎಂಟನೆಯ ಪೇಜಿನಲ್ಲಿ ಪ್ರಸ್ತಾವನೆ ಎನ್ನುವ ಹೆಸರಿನ ಕೆಳಗೆ ಬರೆಯಲಾದ ಎರಡು ಮೂರು ಪೇರಾಗಳಲ್ಲಿ ಹೀಗೆ ಇದೆ ನೋಡಿರಿ. **"ಭೂಲೋಕದಲ್ಲಿ ಎಷ್ಟೋ ಸಾವಿರ, ಲಕ್ಷಗಳ ಗ್ರಂಥಗಳು ಬರೆಯಲ್ಪಟ್ಟಿವೆ. ಆದರೆ, ಈ ಭೂಮಿ ಮೇಲೆ ಮೊಟ್ಟಮೊದಲು ಬರೆಯಲಾದ ಗ್ರಂಥಗಳು, ಅತಿ ಪ್ರಾಚೀನ ಸಾಹಿತ್ಯ ವೇದಗಳೇ, ವೇದಗಳು ಒಂದು ಅದ್ಭುತ ವಿಜ್ಞಾನ ಭಂಡಾರ"**

**"ಈ ವೇದಗಳು ಯಾವಾಗ ಬರೆಯಲ್ಪಟ್ಟಿವೆ? ಈ ವಿಷಯದಲ್ಲಿ ಪಂಡಿತರ ಮಧ್ಯೆ ಏಕಾಭಿಪ್ರಾಯ ಇಲ್ಲ. ಸರ್ವೇಪಲ್ಲಿ ರಾಧಾಕೃಷ್ಣರಂತಹ ಉದ್ಧಂಡರು, ವೇದ ವಿದ್ಯಾಪಾರಂಗತರು ವೇದಗಳು ಕ್ರಿಸ್ತ ಪೂರ್ವ 2000 ವರ್ಷಗಳ ಕೆಳಗೆ ಬರೆಯಲ್ಪಟ್ಟಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ"**

ಭೂಲೋಕದಲ್ಲಿ ತಯಾರಾದ ಲಕ್ಷದಷ್ಟು (ಎಷ್ಟೋ) ಗ್ರಂಥಗಳಲ್ಲಿ ಮೊಟ್ಟಮೊದಲನೆಯದು ವೇದವೇ ಎಂದು ಹೇಳುವುದು, ಅತಿ ಪ್ರಾಚೀನ ಸಾಹಿತ್ಯ ವೇದಗಳೇ ಎಂದು ಹೇಳುವುದು ಪೂರ್ತಿ ಹಾಸ್ಯಾಸ್ಪದವಾಗಿದೆ. ಅಂತಹ ಪುರಾಣ ಗ್ರಂಥಗಳೇ ವೇದಗಳಾದರೆ ಮಾಜೀ ರಾಷ್ಟ್ರಪತಿಯಾದ ಸರ್ವೇಪಲ್ಲಿ ರಾಧಾಕೃಷ್ಣನ್‌ರವರು ವೇದಗಳು ಇಲ್ಲಿಗೆ ನಾಲ್ಕುಸಾವಿರ ವರ್ಷಗಳ ಕೆಳಗೆ ತಯಾರಾಗಿವೆಯೆಂದು ಹೇಗೆ ಹೇಳಿದ್ದಾನೆ? ಎಂದು ಪ್ರಶ್ನೆ ಬಾರದೆ ಇರುವುದಿಲ್ಲ. ವೇದಗಳು ಯಾವಾಗ ತಯಾರಾಗಿವೆಯೊ ಪಂಡಿತರ ಹತ್ತಿರವೇ ಏಕಾಭಿಪ್ರಾಯ ಇಲ್ಲದಿರುವಾಗ, ಅತಿ ಪ್ರಾಚೀನ ಗ್ರಂಥಗಳೆಂದು ಹೇಗೆ ಹೇಳಲಾಗುತ್ತದೆ? ಹಾಗಿರುವಾಗ ಅವುಗಳನ್ನು ಸನಾತನ ಧರ್ಮಗಳು ಎನ್ನುವುದು ಸಹ ತಪ್ಪೇ

ಆಗುತ್ತದಲ್ಲವೆ! ಇವುಗಳೆಲ್ಲವನ್ನು ದೃಷ್ಟಿಯಲ್ಲಿಟ್ಟುಕೊಂಡು ಸರಿಯಾದ ಸಮಾಧಾನಕ್ಕಾಗಿ ಸ್ವಲ್ಪ ಯೋಚಿಸಿದರೆ, ಅದಕ್ಕೆ ಸಂಬಂಧಿಸಿದ ಸಮಾಚಾರ ಹೀಗೆ ಇದೆ.

ಭೂಮಿ ಮೇಲೆ ಆದಿಕವಿ ವಾಲ್ಮೀಕಿ ಎಂದು ಎಲ್ಲರಿಗೂ ತಿಳಿದಿದೆ. ವಾಲ್ಮೀಕಿ ರಾಮಾಯಣವನ್ನು ಬರೆದಿದ್ದಾನೆ. ಆದಿಕವಿ ಬರೆದಿರುವುದೇ ಮೊದಲ ಗ್ರಂಥವಾಗುತ್ತದೆ. ಆದ್ದರಿಂದ ರಾಮಾಯಣ ಎಲ್ಲಾ ಗ್ರಂಥಗಳಿಗಿಂತ ಮೊದಲು ತಯಾರಾದ ಗ್ರಂಥವೆಂದು ಎಲ್ಲರೂ ಖಂಡಿತ ಒಪ್ಪಿಕೊಳ್ಳಬೇಕಾಗುತ್ತದೆ. ಹಾಗಿರುವಾಗ ಎಲ್ಲದಕ್ಕಿಂತ ಮೊದಲು ಬರೆದಿರುವವು ವೇದಗಳೆಂಬುವುದು ಪೂರ್ತಿ ತಪ್ಪು. ಕ್ರಿಸ್ತ ಪೂರ್ವ 2000 ವರ್ಷಗಳ ಕೆಳಗೆ ವೇದಗಳು ಬರೆಯಲ್ಪಟ್ಟಿವೆಯೆಂದು ಡಾ॥ಸರ್ವೇಪಲ್ಲಿ ರಾಧಾಕೃಷ್ಣನ್‌ರವರು ಹೇಳಿರುವುದರಿಂದ ಅವು (ವೇದಗಳು) ಪ್ರಾಚೀನ ಗ್ರಂಥಗಳು ಅಲ್ಲವೆಂದು ತಿಳಿದುಹೋಗುತ್ತಿದೆ. ವೇದಗಳ ಹಿಂದಿರುವ ಸತ್ಯವನ್ನು ಹೊರಗೆ ತೆಗೆದರೆ, ವೇದಗಳು ಕ್ರೀಸ್ತ ಪೂರ್ವ ಮೂರುಸಾವಿರ (3000) ವರ್ಷಗಳ ಪೂರ್ವದಲ್ಲಿ ವ್ಯಾಸನಿಂದ ಬರೆಯಲ್ಪಟ್ಟಿವೆ ಯೆಂದು ತಿಳಿದುಹೋಗುತ್ತಿದೆ. ಪೂರ್ತಿಯಾಗಿ ಈಗಲೂ ಒಟ್ಟು ಐದುಸಾವಿರದ (5300) ಮೂನ್ನೂರು ವರ್ಷಗಳ ಪೂರ್ವದಲ್ಲಿ ವೇದಗಳನ್ನು ವ್ಯಾಸನು ಬರೆದು ವೇದವ್ಯಾಸನೆಂದು ಹೆಸರುವಾಸಿಯಾಗಿದ್ದಾನೆ. ವ್ಯಾಸನು 4 ವೇದಗಳನ್ನು 18 ಪುರಾಣಗಳನ್ನು ಬರೆದ ನಂತರ ಕೊನೆಯಲ್ಲಿ ಭಗವದ್ಗೀತೆಯನ್ನು ಬರೆಯುವುದು ನಡೆದಿದೆ. ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಸಾರಾಂಶವನ್ನು ಬರೆದ ನಂತರ ವೇದಗಳು ಮಾಯೆಯಿಂದ ಕೂಡಿಕೊಂಡಿವೆಯೆಂದು ವ್ಯಾಸನಿಗೆ ತಿಳಿದುಹೋಗಿದೆ. ಹಾಗೆ ಗುಣ ಮಾಯೆಯಿಂದ ಕೂಡಿಕೊಂಡ ವೇದಗಳನ್ನು ಬರೆದು ಸಮಾಜಕ್ಕೆ ಕೆಡಕು ಮಾಡಿದ್ದೇನೆಂದು ವ್ಯಾಸನು ಪೂರ್ತಿಯಾಗಿ ದುಃಖಪಟ್ಟಿದ್ದಾನೆ. ಇದನ್ನನುಸರಿಸಿ ವೇದಗಳ ಗ್ರಂಥಕರ್ತ ವ್ಯಾಸನೆಂದು, ವೇದಗಳು ಸುಮಾರು 5300 ವರ್ಷಗಳ ಕೆಳಗೆ ವ್ಯಾಸನಿಂದ ಬರೆಯಲ್ಪಟ್ಟಿವೆಂದು ತಿಳಿದುಹೋಗುತ್ತಿದೆ. ಆದ್ದರಿಂದ ಅವುಗಳನ್ನು ಪ್ರಾಚೀನ ಗ್ರಂಥಗಳು ಎನ್ನಬಾರದು.

ವೇದಗಳು ದ್ವಾಪರಯುಗ ಕೊನೆಯಲ್ಲಿ ತಯಾರಾಗಿದ್ದಾಗ, ತ್ರೇತಾಯುಗ ಪ್ರಾರಂಭದಲ್ಲಿಯೇ ವಾಲ್ಮೀಕಿಯಿಂದ ರಾಮಾಯಣ ತಯಾರಾಗಿದೆ. ಆದ್ದರಿಂದ ವೇದಗಳಿಗಿಂತ ಪ್ರಾಚೀನ ಗ್ರಂಥ ರಾಮಾಯಣವೆಂದು ಹೇಳಬಹುದು.

ಈಗ ಅದ್ದಂಕಿ ರಂಜಿತ್ ಬರೆದ ಒಂದು ಕರಪತ್ರದಲ್ಲಿನ ವಿಷಯವನ್ನು ಗಮನಿಸೋಣ. ಕರಪತ್ರದಲ್ಲಿನ ವಿಷಯದಲ್ಲಿರುವ ತಪ್ಪೊಪ್ಪುಗಳನ್ನು ತಿಳಿದುಕೊಂಡರೆ ಜೀವನದಲ್ಲಿ ನಾವು ಎಂತಹ ತಪ್ಪು ಮಾಡದಂತೆ ಆಧ್ಯಾತ್ಮಿಕ ಮಾರ್ಗದಲ್ಲಿ ಸಾಗುತ್ತೇವೆಂದು ತಿಳಿದು, ಅದೇ ಕೆಲಸವಾಗಿ ಆ ವಿಷಯವನ್ನು ಗಮನಿಸೋಣ. **"ವೇದಕಾಲದ ಹಿಂದೂಮತ ಸಿದ್ಧಾಂತದ ಪ್ರಕಾರ ಮಾನವನು ಪರಮಾತ್ಮನ ಸನ್ನಿಧಿಗೆ ಸೇರುವಾಗ ಪ್ರಾಣಿ ರಕ್ತ ಪ್ರೋಕ್ಷಣ ನಿಶ್ಚಿತ ಎಂದು ನಾನು ಗಮನಿಸಿದ್ದೇನೆ."**

**"ವೇದಕಾಲದಲ್ಲಿ ಹಿಂದೂಗಳು ಬಲಿಗಳನ್ನು ಅರ್ಪಿಸಿದ್ದಾರೆ, ಯಜ್ಞಗಳು ನಿರ್ವಹಿಸಿದ್ದಾರೆ, ಸರ್ವಪಾಪಪರಿಹಾರ ರಕ್ತಪ್ರೋಕ್ಷಣ ಮವಶಕ್ಯವ್ ಅಂದರೆ ರಕ್ತ ಚಿಂದಿಸದೆ ಪಾಪಕ್ಷಮಾಪಣೆ ಉಂಟಾಗುವುದಿಲ್ಲ ಎಂದು ಸಾರಿ ಹೇಳಿದ್ದಾರೆ."**

**"ಸರ್ವಪಾಪಪರಿಹಾರಕ್ಕೋಸ್ಕರ ಒಂದು ಯಜ್ಞ ನಡೆಯಬೇಕಾಗಿದೆ ಎಂದು ವೇದ ಕಾಲದ ಹಿಂದೂ ಋಷಿಗಳು ನಂಬಿದ್ದಾರೆ. ಆ ಯಜ್ಞಕ್ಕೆ "ಅಜಾಮೇಧಂ" ಎಂದು ಹೆಸರು ಇಟ್ಟಿದ್ದಾರೆ. ಒಂದು ಮಚ್ಚೆ ಇಲ್ಲದ ಮೇಕೆಯನ್ನು ತಂದು ಅದರ ತಲೆಮೇಲೆ ಬಲಿತಿರುವ ಮುಳ್ಳನ್ನು ಸುತ್ತಿ ಕಿರೀಟವಾಗಿಡಬೇಕು. ಆ ಮೇಕೆಯನ್ನು ಒಂದು ಚೆಕ್ಕೆ ಹಲಿಗೆಗೆ ಮೊಳೆಯಿಂದ ಒಡೆದು ನೇತಾಡಬಿಡಬೇಕು. ಅದರ ಮೂಳೆಗಳು ಮುರಿಯದಂತೆ ಜಾಗ್ರತೆಯಿಂದ ಅದರ ರಕ್ತವೆಲ್ಲಾ ಸೋರಿಹೋಗಬೇಕು. ಹಾಗೆ ಆ ಮೇಕೆ ಮರಣಿಸಿದ ನಂತರ ಮತ್ತೆ ಅದಕ್ಕೆ ಪ್ರಾಣ ತರಿಸಬೇಕು ಅದೇ ಅಜಾಮೇಧಂ ಅಂದರೆ."**

ಈ ವಾಕ್ಯಗಳೆಲ್ಲಾ ಗಮನಿಸಿದರೆ ಒಂದು ಹೊಸ ಯಜ್ಞವನ್ನು ಕುರಿತು ಹೇಳಿದ್ದಾರೆಂದು ತಿಳಿಯುತ್ತಿದೆ. ಆ ಯಜ್ಞದ ಹೆಸರು "ಅಜಾಮೇಧಂ" ಎಂದು ಹೇಳಿ ಅದು ಹೇಗೆ ಮಾಡಬೇಕೊ ಎಂದೂ ಸಹ ಹೇಳಿದ್ದಾರೆ. ಯಜ್ಞದ ಹೆಸರು ಏನಾದರೂ ಆಗಬಹುದು. ಅದನ್ನು ಹೇಗಾದಾರೂ ಮಾಡಬಹುದು. ಇಷ್ಟಕ್ಕು ಹಾಗೆ ಮಾಡುವ ಯಜ್ಞದಿಂದ ಏನಾದರೂ ದೈವಿಕ ಲಾಭವಿದೆಯಾ, ಇಲ್ಲವೆ ಪ್ರಪಂಚ ಲಾಭವಿದೆಯಾ ಎಂದು ಆಲೋಚಿಸಿದರೆ ಅದರ ಮೂಲಕ ಎರಡೂ ಇಲ್ಲವೆಂದು ತಿಳಿಯುತ್ತಿದೆ. ಯಾರೋ ಮತಿಭ್ರಮಿಸಿ ಹೇಳಿದವರ ಮಾತುಗಳನ್ನೆಲ್ಲ ಏಕೆ ಕೇಳಬೇಕು? ಕೇಳಿದಷ್ಟು ಮಾತ್ರಕ್ಕೆ ಅದರಲ್ಲಿನ ಯುಕ್ತಾಯುಕ್ತಗಳನ್ನು ಆಲೋಚಿಸದೇ ಅವರು ಹೇಳಿದಹಾಗೆ ಏಕೆ ಮಾಡಬೇಕು? ಒಲೆ ಮೇಲೆ ಸೋರೆ ಇಟ್ಟು ಕೆಲವು ತರಕಾರಿ, ಅಕ್ಕಿ ಹಾಕಿ ಮಸಾಲೆಗಳು ಹಾಕಿ ಮಾಡಿದರೆ ಅಡಿಗೆ ಆಗುತ್ತದೆ. ಹಾಗೆ ಮಾಡಿರುವುದನ್ನು ತರಕಾರಿ ಪಲಾವು (ವೆಜಿಟಬುಲ್ ಬಿರಿಯಾನಿ) ಎಂದು ಅನ್ನಬಹುದು. ಆದರೆ ತಿಳಿಯದೆ ತರಕಾರಿಯಲ್ಲಿ ಒಂದು ಪಾಪರಕಾಯನ್ನು (ಕಹಿ ಕರಬೂಜ ಕಾಯಿ) ಕೊಯ್ದುಹಾಕಿ ಮಾಡಿದರೆ ಅದು ಸಹ ತರಕಾರಿಯ ಪಲಾವೇ ಎಂದು ಕರೆಯಲ್ಪಡುತ್ತದೆ. ಆದರೆ ಅದು ತಿನ್ನುವುದಕ್ಕೆ ಮಾತ್ರ ಕೆಲಸಕ್ಕೆ ಬರುವುದಿಲ್ಲ. ನೋಡುವುದಕ್ಕೆ ಮಾತ್ರ ಕೆಲಸಕ್ಕೆ ಬರುತ್ತದೆ. ತರಕಾರಿ, ಅಕ್ಕಿ ಮಸಾಲೆ ಎಲ್ಲಾ ಹಾಕಿರುವುದರಲ್ಲಿ ಪಾಪರಕಾಯನ್ನು (ಹುಚ್ಚುಕಾಯನ್ನು) ಸೌತೆಕಾಯಿ ಅಂದುಕೊಂಡು ಕೊಯ್ದುಹಾಕಿರುವುದರಿಂದ, ಮಾಡಿದ ಪಲಾವು ಎಲ್ಲವೂ ಕಹಿಯಾಗಿ ಮಾರ್ಪಟ್ಟು, ಯಾರೂ ತಿನ್ನುವುದಕ್ಕು ಸಹ ಉಪಯೋಗಪಡುವುದಿಲ್ಲ. ಕೊನೆಗೆ ಪ್ರಾಣಿಗಳು ಸಹ ತಿನ್ನುವುದಿಲ್ಲ. ಅದೇ ವಿಧವಾಗಿ ಯಜ್ಞ ಎಂದರೆ ಹೇಗಿರುತ್ತದೆ, ಹೇಗೆ ಮಾಡಬೇಕು? ಎಂದು ತಿಳಿಯದೆ ಯಾರೋ ಹೇಳಿದ್ದಾರೆಂದು ಮಾಡಿದರೆ, ಕೊನೆಗೆ ತರಕಾರಿಯ ಬಿರಿಯಾನಿ ಪಾಪರಕಾಯಿ ಬಿರಿಯಾನಿಯಾದಂತೆ ಮಾಡಿದ ಯಜ್ಞ ಯಾವುದೇ ಕೆಲಸಕ್ಕೆ ಬಾರದಂತೆ ಹೋಗುತ್ತದೆ. ಹಾಗೆಯೇ ವೇದಗಳಲ್ಲಿ ಯಾರೋ ಹೇಳಿದ ಅಜಾಮೇಧಂ ಎಂಬ ಯಜ್ಞವನ್ನು ಕುರಿತು ಹಿಂದೆ ಮುಂದೆ ಆಲೋಚಿಸದೆ ಆಚರಿಸಿದರೇ,

ತರಕಾರಿಯ ಬಿರಿಯಾನಿ ಹುಚ್ಚಕಾಯಿಗಳ ಬಿರಿಯಾನಿ ಆದಹಾಗೆ ಅದು ಯಾವುದೇ ಕೆಲಸಕ್ಕೆ ಬಾರದಂತೆ ಹೋಗುತ್ತದೆ. ಕೊನೆಗೆ ವೃಥಾಪ್ರಯಾಸವಾಗುತ್ತದೆ.

ವೇದಗಳು, ಪುರಾಣಗಳು ಆರು ಶಾಸ್ತ್ರಗಳಲ್ಲಿ ಯಾವ ಶಾಸ್ತ್ರಕ್ಕು ಸಂಬಂಧಿಸಿರುವವು ಅಲ್ಲ. ಶಾಸ್ತ್ರಬದ್ಧವಲ್ಲದಿರುವುದನ್ನು ದೊಡ್ಡದಾಗಿ ಹೇಳಿ ಕೊಳ್ಳುವುದನ್ನು, ಅದಕ್ಕೆ ಯಾವುದೋ ಫಲಿತವಿರುತ್ತದೆಂದು ಹೇಳಿಕೊಳ್ಳುವುದು ಎಲ್ಲವೂ ಮೂಢನಂಬಿಕೆಯಾಗುತ್ತದೆ. ಶಾಸ್ತ್ರೀಯತೆ ಇಲ್ಲದಿರುವುದನ್ನು ಯಾರೂ ಸಮ್ಮತಿಸುವುದಿಲ್ಲ. ಮೇಲಿನ ವಾಕ್ಯದಲ್ಲಿ ಮಾನವನು ಪರಮಾತ್ಮನ ಸನ್ನಿಧಿಗೆ ಸೇರುವುದಕ್ಕೆ ಜಂತುರಕ್ತ ಪ್ರೋಕ್ಷಣೆ ಖಂಡಿತ ಎಂದು ಬರೆದಿದ್ದಾರೆ. ಈ ಮಾತು ಮೂರು ದೈವ ಗ್ರಂಥಗಳಲ್ಲಿ ಎಲ್ಲಿಯಾದರೂ ಇದೆಯಾ? ಎಂದು ಕೇಳುತ್ತಿದ್ದೇನೆ. ಅಷ್ಟೇ ಅಲ್ಲದೆ ಮೇಲಿನ ವಾಕ್ಯದಲ್ಲಿ "ಸರ್ವ ಪಾಪ ಪರಿಹಾರೋ ರಕ್ತಮೋಕ್ಷಣ ಮವಶ್ಯಕಮ್" ಎನ್ನುವ ಮಾತು ಯಾವ ಶಾಸ್ತ್ರದಲ್ಲಿದೆಯೋ ಹೇಳಬಲ್ಲಿರಾ? ಪುಕ್ಕಟೆ ಪುರಾಣಗಳು, ನಿಷ್ಫಲವಾದ ವೇದಗಳಲ್ಲಿನ ಮಾತುಗಳನ್ನು ಹೇಳಬೇಕಾದ ಅವಶ್ಯಕತೆ ಏನು ಬಂದಿದೆ? ದೇವರಲ್ಲಿ ಐಕ್ಯವಾಗುವುದಕ್ಕೆ ದೇವರ ವಿಷಯ ವಾಗುತ್ತದೆ. ದೇವರ ವಿಷಯಗಳು ದೈವ ಗ್ರಂಥಗಳಾದ ಧರ್ಮಶಾಸ್ತ್ರಗಳಲ್ಲಿ ಇರುತ್ತದೆ. ದೈವ ಗ್ರಂಥಗಳಾದ ಭಗವದ್ಗೀತಾ, ಬೈಬಲ್, ಖುರಾಆನ್ ಗ್ರಂಥಗಳಲ್ಲಿ ಎಲ್ಲಿಯಾದರೂ 'ರಕ್ತಪ್ರೋಕ್ಷಣ' ಎನ್ನುವ ಮಾತನ್ನು ದೇವರು ಹೇಳಿದ್ದಾನೇನೊ ತೋರಿಸುತ್ತೀರಾ? ಮೇಕೆಯ ರಕ್ತ ಸೋರುವಹಾಗೆ ಮಾಡಿ ಅದನ್ನು ಸಾಯಿ ಸುವುದು ಪಾಪದಿಂದ ಕೂಡಿಕೊಂಡ ಕೆಲಸವಲ್ಲದೆ ಅಜಾಮೇಧ ಯಜ್ಞವೆಂದು ಸಮರ್ಥಿಸಿಕೊಳ್ಳುವುದೇನು? ರಕ್ತ ಸೋರಿ ಸತ್ತುಹೋದ ಮೇಕೆಯನ್ನು ಪುನಃ ಯಾರಾದರೂ ಬದುಕಿಸುತ್ತಾರಾ? ಪ್ರಕೃತಿಸಿದ್ಧವಾದ ಸಾವು ಹುಟ್ಟುಗಳ ಸಿದ್ಧಾಂತಕ್ಕೆ ಅದು ವಿರುದ್ಧವಲ್ಲವೆ? ರಕ್ತ ಹೋಗಿ ಮರಣಿಸಿದ ಮೇಕೆಯನ್ನು ಬದುಕಿಸುವುದು ಸಾಧ್ಯವಾಗುವ ಕೆಲಸವೇನಾ? ಹಾಗೆ ಮರಣಿಸಿ ಬದುಕಿರುವವನು ಯೇಸು ಇದ್ದಾನೆಂದು ಹೇಳುವುದಕ್ಕೆ ಈ ಅಜಾಮೇಧ ಯಜ್ಞವನ್ನು ಕುರಿತು ಹೇಳುವುದೇ ಹೊರತು ಬೇರೆ ಏನು ಅಲ್ಲ. ಹಾಗೆ ಹೇಳಬೇಕಾದ ಅವಶ್ಯಕತೆ ಏನು ಬಂದಿದೆ?

ಯಜ್ಞಗಳ ವಿಷಯವನ್ನು ಕುರಿತು ದೈವಗ್ರಂಥವಾದ ಬೈಬಲ್, ಖುರಾನ್‌ನಲ್ಲಿ ಹೇಳದಿದ್ದರೂ, ಭಗವದ್ಗೀತೆಯಲ್ಲಿ ವಿವರವಾಗಿ ಹೇಳಿದ್ದಾರೆ. ಯಜ್ಞಗಳನ್ನು ಕುರಿತು "ಅಧಿ ಯಜ್ಞೋಹಮೇ ವಾತ್ರ ದೇಹೇ ದೇಹ ಭೃತಾಂವರ" ಎಂದು ಅಕ್ಷರ ಪರಬ್ರಹ್ಮ ಯೋಗವೆಂಬ ಅಧ್ಯಾಯದಲ್ಲಿ ಸ್ವತಃವಾಗಿ ಭಗವಂತನಾದ ದೇವರೇ ಹೇಳಿದ್ದಾನೆ. ಈ ಮಾತನ್ನನುಸರಿಸಿ ಯಜ್ಞಗಳು ದೇಹದಲ್ಲಿಯೇ ನಡೆಯುತ್ತಿವೆಯೆಂದು, ಹೊರಗೆ ನಡೆಯುವ ಯಜ್ಞಗಳು ದೈವ ಸಂಬಂಧ ಅಲ್ಲವೆಂದು ತಿಳಿದುಹೋಗಿದೆ. ಶರೀರದೊಳಗೆ ನಡೆಯುವ ಯಜ್ಞಗಳನ್ನು ಕುರಿತು ಭಗವಂತನು ತನ್ನ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೂವತ್ತು ಮೂರನೇ (33) ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

**33. ಶ್ಲೋ ॥ ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ।**
**ಸರ್ವಂ ಕರ್ಮಾಖಿಲಂ ಪಾರ್ಥ! ಜ್ಞಾನೇ ಪರಿಸಮಾಪ್ಯತೇ ॥**

**ಭಾವಾರ್ಥ :** "ದ್ರವ್ಯಯಜ್ಞಕ್ಕಿಂತ ಶ್ರೇಷ್ಠವಾದುದು ಜ್ಞಾನಯಜ್ಞ ಇದೆ. ಜ್ಞಾನ ಯಜ್ಞದಲ್ಲಿ ಸರ್ವಕರ್ಮಗಳು ಸುಟ್ಟು ಬೂದಿಯಾಗಿ ಹೋಗುತ್ತಿವೆ" ಎಂದು ಹೇಳಲ್ಪಟ್ಟಿದೆ. ಇದರಿಂದ ಶರೀರದಲ್ಲಿ ಎರಡು ವಿಧಗಳ ಯಜ್ಞಗಳು ನಡೆಯುತ್ತಿವೆಯೆಂದು, ಅದರಲ್ಲಿ ಒಂದು "ದ್ರವ್ಯಯಜ್ಞ", ಎರಡನೆಯದು ಜ್ಞಾನಯಜ್ಞವೆಂದು ತಿಳಿಯುತ್ತಿದೆ. ಆ ಎರಡು ಯಜ್ಞಗಳಲ್ಲಿ ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞ ಶ್ರೇಷ್ಠವಾದುದೆಂದು, ಮನುಷ್ಯ ಮಾಡಿಕೊಂಡ ಸರ್ವಕರ್ಮಗಳು ಅದರಲ್ಲಿ ಸುಟ್ಟುಹೋಗುತ್ತವೆಂದು ತಿಳಿಯುತ್ತಿದೆ. ಈ ವಿಧವಾಗಿ ಯಜ್ಞಗಳು ಶರೀರದಲ್ಲಿಯೇ ನಡೆಯುತ್ತಿವೆ ಎಂದು, ಅವುಗಳಿಗೆ ನಾನೇ ಅಧಿಪತಿಯಾಗಿದ್ದೇನೆಂದು ಅಕ್ಷರ ಪರಬ್ರಹ್ಮ ಯೋಗ ನಾಲ್ಕನೇ ಶ್ಲೋಕದಲ್ಲಿ "ಅಧಿ ಯಜ್ಞೋಹಮೇ ವಾತ್ರ ದೇಹೇ ದೇಹಾ ಭೃತಾಂವರ" ಎಂದು ಅಂದಿದ್ದಾನೆ. ಹೀಗೆ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಶಾಸ್ತ್ರಬದ್ಧವಾಗಿ ಯಜ್ಞಗಳನ್ನು ಕುರಿತು ಹೇಳಿರುವಾಗ, ಇದನ್ನನುಸರಿಸಿ ಹೇಳಿಕೊಳ್ಳದೆ ಶಾಸ್ತ್ರವಲ್ಲದಂತಹ ವೇದಗಳನ್ನು ಕುರಿತು, ಅವುಗಳಲ್ಲಿನ ವಿಷಯಗಳನ್ನು ಕುರಿತು ಏಕೆ ಹೇಳಿಕೊಳ್ಳಬೇಕು? ಕರ್ಮಗಳು

ಇಲ್ಲದಂತೆ ಹೋದಾಗ ಜನ್ಮಕ್ಕೆ ಹೋಗದಂತೆ ಯಾರಾದರೂ ದೇವರಲ್ಲಿ ಐಕ್ಯವಾಗುತ್ತಾನೆ. ಅಷ್ಟೇಯಾಗಲಿ ಹೊರಗಿನ ಯಜ್ಞಗಳಿಂದಾಗಲಿ, ರಕ್ತವನ್ನು ಸೋರಿಸುವುದು ಎನ್ನುವ ಅಜಾಮೇಧ ಯಜ್ಞದಿಂದಾಗಲಿ ಯಾರೂ ದೇವರನ್ನು ಸೇರಲಾರನು.

'ಹೈಂದವ ಕ್ರೈಸ್ತವ' ಎನ್ನುವ ಗ್ರಂಥದಲ್ಲಿ ಪೂರ್ತಿ ವೇದಗಳನ್ನು, ಪುರಾಣಗಳನ್ನು ಹೇಳುವುದರ ಮುಖ್ಯ ಉದ್ದೇಶ ಹಿಂದೂಗಳನ್ನು ಆಕರ್ಷಿಸುವುದಕ್ಕೇ ಎಂದು ತಿಳಿದುಹೋಗಿದೆ. ಹಿಂದೂಗಳಿಗೆ ಸಂಬಂಧಿಸಿದ ವೇದಗಳನ್ನು, ಪುರಾಣಗಳನ್ನು ಹೇಳುತ್ತಾ ಅವುಗಳನ್ನು ವಿವರಿಸುತ್ತಾ, ಆ ವಿವರದ ಪ್ರಕಾರ ಹಿಂದೂಗಳನ್ನು ಕ್ರೈಸ್ತವದ ಕಡೆ ತೆಗೆದುಕೊಂಡು ಹೋಗುವುದಕ್ಕೆಂದು ಸುಲಭವಾಗಿ ಗ್ರಹಿಸಬಹುದು. ಒಳಗೆ ಯಾವುದೋ ಉದ್ದೇಶವನ್ನು ಇಟ್ಟುಕೊಂಡು ಹೊರಗೆ ಮತ್ತೊಂದು ವಿಧವಾಗಿ ಮಾತನಾಡು ವುದು ಕಪಟ ಎನ್ನುತ್ತೇವೆ. ಅದ್ದಂಕಿ ರಂಜಿತ್ ಹೇಳಿದ ವಿಷಯಗಳೆಲ್ಲವೂ ಮೊದಲು ಹಿಂದೂಗಳಿಗೆ ಸಂಬಂಧಿಸಿದ ವೇದಗಳು, ಪುರಾಣಗಳಿಂದ ಪ್ರಾರಂಭಮಾಡಿ ಕೊನೆಗೆ ಕ್ರೈಸ್ತವವನ್ನು, ಯೇಸುನನ್ನು ಸಮರ್ಥಿಸುವುದು, ಯೇಸು ಶ್ರೇಷ್ಠವಾದ ದೇವರೆಂದು ಹೇಳುವುದು ನಡೆಯುತ್ತಿದೆ. ಒಟ್ಟು 'ಹೈಂದವ ಕ್ರೈಸ್ತವ' ಎನ್ನುವ ಗ್ರಂಥವೆಲ್ಲಾ ಕೊನೆಯವರೆಗೂ ಹಾಗೆಯೇ ಸಾಗಿದೆ. ಯೇಸು ದೊಡ್ಡ ದೇವರೆಂದು ನಾವೂ ಸಹ ಒಪ್ಪಿಕೊಳ್ಳುತ್ತೇವೆ. ಬೈಬಲ್ ಗ್ರಂಥದಲ್ಲಿ ಯೇಸು ದೊಡ್ಡವನೆಂದು, ತಿಳಿದುಕೊಳ್ಳುವವನಿಗೆ ತಿಳಿದುಕೊಳ್ಳುವಷ್ಟು ಇದೆ. ಶಾಸ್ತ್ರಬದ್ಧವಾಗಿ ಸಮೃದ್ಧಿಯಾಗಿ ಯೇಸು ದೇವರು ಎಂದು ತಿಳಿಯುವಂತೆ ಇರುವಾಗ ಬೈಬಲ್ ಹೆಸರು ಹೇಳದಹಾಗೆ, ಹಿಂದೂಗಳ ವೇದಗಳನ್ನು ತೆಗೆದುಕೊಂಡು ಹೇಳುವುದರ ಹಿಂದೆ ಹಿಂದೂಗಳನ್ನು ಕ್ರೈಸ್ತವದಕಡೆ ಸೆಳೆಯುವುದಕ್ಕೆ ಹೊರತು ಬೇರೆ ಉದ್ದೇಶ ಇಲ್ಲವೆಂದು ತಿಳಿದುಹೋಗುತ್ತಿದೆ.

ಈ ವಿಧವಾಗಿ ಬರೆಯುವುದು ದುರುದ್ದೇಶದಿಂದ ಮಾಡಿದ ಕೆಲಸವೇ ಎಂದು ಹೇಳಬಹುದು. ದೇವರನ್ನು ಕುರಿತು ಮಾತನಾಡುವ ಹಕ್ಕು ಎಲ್ಲರಿಗೂ

ಇದೆ. ಬೈಬಲ್ ಕುರಿತು ಹೇಳಬೇಕೆಂದುಕೊಂಡರೆ ಹೇಳು, ಅದರಲ್ಲಿ ಇಲ್ಲದ ದೇವರ ವಿಷಯಗಳು ವೇದಗಳಲ್ಲಿ ಇವೆಯಾ? ಅಥವಾ ಬೈಬಲ್‌ನಲ್ಲಿ ವೇದಗಳನ್ನು ಕುರಿತು ಹೇಳಿದ್ದಾರಾ? ವೇದಗಳನ್ನು ದೊಡ್ಡದಾಗಿ ಇಟ್ಟುಕೊಂಡ ಹಿಂದೂಗಳನ್ನು ತಮ್ಮ ಮತದಕಡೆ ಸೆಳೆದುಕೊಳ್ಳುವುದಕ್ಕೆ ವೇದಗಳನ್ನೇ ಹೇಳಿ ಕೊನೆಗೆ ವೇದಗಳಲ್ಲಿ ಸಹ ಕ್ರೈಸ್ತವವನ್ನು, ಯೇಸುವನ್ನು ಕುರಿತು ಇದೆಯೆಂದು ಹೇಳುವುದು ಹಿಂದೂ ಗಳನ್ನು ದಾರಿಮರಳಿಸುವುದಕ್ಕೆ ಎಂದು ತಿಳಿದುಹೋಗುತ್ತಿದೆ. ಈ ವಿಧವಾಗಿ ತಮ್ಮ ಮತವನ್ನು ಬೆಳೆಸಿಕೊಳ್ಳುವುದಕ್ಕೆ ಪ್ರಯತ್ನ ಮಾಡುವುದನ್ನು ದೇವರು ಸಹ ಒಪ್ಪಿಕೊಳ್ಳುವುದಿಲ್ಲ. ಯೇಸು ದೊಡ್ಡವನು ಎಂದು ಹೇಳುವುದೇ ಹೈಂದವ ಕ್ರೈಸ್ತವ ಎನ್ನುವ ಗ್ರಂಥದಲ್ಲಿನ ಸಾರಾಂಶ. ಯೇಸು ದೊಡ್ಡವನು ಎನ್ನುವ ವಿಷಯವನ್ನು ನಾವೂ ಸಹ ಹೇಳುತ್ತಿದ್ದೇವೆ. ಆದರೆ ನಾನು ವೇದಗಳನ್ನು, ಪುರಾಣಗಳನ್ನು ಆಧಾರ ಮಾಡಿಕೊಂಡು ಹೇಳಲಿಲ್ಲ. ಬೈಬಲ್ ಗ್ರಂಥದ ಪ್ರಕಾರ ಅದರಲ್ಲಿ ಆತನು ಹೇಳಿದ ಜ್ಞಾನದ ಪ್ರಕಾರ ಯೇಸು ದೊಡ್ಡವನೇ, ನಿಜವಾಗಲು ದೇವರೇ ಎಂದು ಹಿಂದೂವಾದ ನಾನೂ ಸಹ ಹೇಳುತ್ತಿದ್ದೇನೆ. ನಾನು ಪದ್ಧತಿ ಪ್ರಕಾರ ಬೈಬಲ್ ಪ್ರಕಾರ ಹೇಳುತ್ತಿದ್ದೇನೆ. ದೈವಜ್ಞಾನ ತಿಳಿದ ಯಾರಾಗಲಿ ಆತನು ಹೇಳಿದ ಜ್ಞಾನದ ಪ್ರಕಾರ ಆತನನ್ನು ದೊಡ್ಡವನಾಗಿಯೇ ಹೇಳಬಹುದು. ಭಗವದ್ಗೀತೆಯಲ್ಲಿರುವ ಜ್ಞಾನವನ್ನೇ ಯೇಸು ಹೇಳಿರುವುದರಿಂದ, ಭಗವದ್ಗೀತೆ ಯನ್ನು ಹೇಳಿದ ಕೃಷ್ಣನೇ ಯೇಸುವಾಗಿ ಹುಟ್ಟಿದ್ದಾನೆಂದು ನಾವು ಬಹಳಸಲ ಹೇಳಿದ್ದೇವೆ. ಆದರೆ ನಾವು ನಮ್ಮ ಮನಸ್ಸಿನಲ್ಲಿನ ಮಾತನ್ನು ಇರುವುದು ಇದ್ದಹಾಗೆ ಹೇಳಿದ್ದೇವೆ. ವೇದಗಳನ್ನು, ಪುರಾಣಗಳನ್ನು ಅಡ್ಡ ಇಟ್ಟುಕೊಂಡು ಅಡ್ಡವಾಗಿ ಏನು ಹೇಳಲಿಲ್ಲ. ಅಂತರಂಗದಲ್ಲಿ ಕ್ರೈಸ್ತವವನ್ನು ಯೇಸುನನ್ನು ಪ್ರಚಾರ ಮಾಡಬೇಕೆಂದು ಇರುವುದು ಒಳ್ಳೆಯದೇ. ಆತನು ದೇವರೇ ಆದ್ದರಿಂದ ದೈವ ಗ್ರಂಥವಾದ ಬೈಬಲ್‌ನನ್ನು ಅನುಸರಿಸಿ ಅದೇ ಮಾತನ್ನು ಹೊರಗೆ ಹೇಳಬಹುದು. ಹಾಗಲ್ಲದೆ ಕೆರೆಯಲ್ಲಿ ಮೀನಿನಂತಿರುವ ಹಿಂದೂಗಳಿಗೆ ವೇದಗಳು, ಪುರಾಣಗ ಳೆಂಬ ಬಲೆಹಾಕಿ ಹಿಡಿದುಕೊಂಡು ಕ್ರೈಸ್ತವವೆಂಬ ಪುಟ್ಟಿಯಲ್ಲಿ ಹಾಕಿ ಇಡುವುದು

ಒಳ್ಳೆಯದಲ್ಲ ವೆಂದು, ಆ ಪದ್ಧತಿಯನ್ನು, ಆ ಮತ ಪ್ರಚಾರಧೋರಣಿಯನ್ನು ದೇವರು ಒಪ್ಪಿಕೊಳ್ಳುವುದಿಲ್ಲವೆಂದು ತಿಳಿಸುತ್ತಿದ್ದೇವೆ. 'ಹೈಂದವ ಕ್ರೈಸ್ತವ' ಎನ್ನುವ ಹೆಸರಿನಲ್ಲಿಯೇ ಹಿಂದೂಗಳನ್ನು ಕ್ರೈಸ್ತವರನ್ನಾಗಿ ಮಾರ್ಪಡಿಸುತ್ತೇನೆಂದು ಹೇಳಿದ ಹಾಗೆ ಇದೆ. ಆ ಗ್ರಂಥದಲ್ಲಿ ಯಾವ ಮೂಲೆ ನೋಡಿದರೂ ಅದೆ ಉದ್ದೇಶ ಕಾಣಿಸುತ್ತಿದೆ. ಇದೆಲ್ಲವೂ ನನ್ನ ಹಿಂದೂ ಮತ ಕ್ಷೀಣಿಸಿ ಹೋಗುತ್ತದೆಂಬ ಬಾಧೆಯಿಂದಲೋ, ಕ್ರೈಸ್ತವ ಮತದ ಮೇಲೆ ಅಸೂಯೆದಿಂದಲೋ ನಾನು ಹೇಳುತ್ತಿಲ್ಲ. ಹಾಗೆ ಹೇಳುವುದು ದೇವರ ವಿಧಾನಕ್ಕೆ ವಿರುದ್ಧವೆಂದು ತಿಳಿದು ಹೇಳುತ್ತಿದ್ದೇನೆ. ವೇದಗಳನ್ನು ಹೊಗಳಿ ಹೇಳಿದಷ್ಟು ಮಾತ್ರಕ್ಕೆ ನಾವು ಅದನ್ನು ನಂಬಿ ಹಿಗ್ಗುವುದಿಲ್ಲ. ವೇದಗಳು ಹಿಂದೂತ್ವದಲ್ಲಿರುವವಾದರೂ ಅವು ಭಗವದ್ಗೀತೆಗಿಂತ ಕಡಿಮೆಯಾದವೆಂದು, ಅದರಲ್ಲಿ ದೈವತ್ವ ಇಲ್ಲವೆಂದು, ಭಗವದ್ಗೀತೆಯಲ್ಲಿ ದೇವರೇ ಅವುಗಳನ್ನು ಒಪ್ಪಿಕೊಳ್ಳದೆ ಖಂಡಿಸಿದ್ದಾನೆಂದು ಹೇಳುತ್ತಿದ್ದೇವೆ.

ನಾವು ಇಂದೂತ್ವವನ್ನು ಕಾಪಾಡುತ್ತೇವೆ ಎನ್ನುವ ಉದ್ದೇಶದಿಂದ "ಹೈಂದವ ಕ್ರೈಸ್ತವ"ದಲ್ಲಿನ ಪ್ರತಿ ವಾಕ್ಯಕ್ಕು ಶಾಸ್ತ್ರಬದ್ಧವಾದ ವಿವರವನ್ನು ಕೊಡುತ್ತಾ ಅದರಲ್ಲಿನ ತಪ್ಪು ಒಪ್ಪುಗಳನ್ನು ಎಲ್ಲರಿಗೂ ಅರ್ಥವಾಗುವಹಾಗೆ ಹೇಳುತ್ತಿದ್ದೇವೆ. ಇಂದೂತ್ವವನ್ನು ಕಾಪಾಡೋಣ ಎಂದು ಅನ್ನುವುದು ನೀವು ನಿಮ್ಮ ಮತವನ್ನು ದೊಡ್ಡದಾಗಿ ಹೇಳುವುದೇ ಅಲ್ಲವೆ! ಎಂದು ಕೆಲವರು ಕ್ರೈಸ್ತವರು ಪ್ರಶ್ನಿಸಬಹುದು. ಇಂದೂತ್ವ ಎನ್ನುವುದು ಒಂದು ಮತವಲ್ಲ, ಮತದಲ್ಲಿನ ಭಾಗವು ಅಲ್ಲ. ಇಂದೂತ್ವ ಎನ್ನುವುದು ಎಲ್ಲಾ ಮತಗಳಲ್ಲಿರುವ ದೇವರ ವಿಧಾನ. ಇಂದುತ್ವ ಅಂದರೆ ಏನೊ, ಅದರ ಅಸಲು ಅರ್ಥ ಏನೊ ಗ್ರಂಥದ ಕೊನೆಯಲ್ಲಿ ತಿಳಿಸುತ್ತೇವೆ. ಕೊನೆಯಲ್ಲಿ ಹೇಳುವುದೇ ಸರಿಯಾದ ಸಂದರ್ಭವಾಗುತ್ತದೆ. ಆದ್ದರಿಂದ ನಿಮ್ಮ ಪ್ರಶ್ನೆಗೆ ಉತ್ತರವನ್ನು ಸಹನೆಯಿಂದ ನೋಡಿರೆಂದು ತಿಳಿಸುತ್ತಿದ್ದೇನೆ.

**ಈಗ ಹೈಂದವ ಕ್ರೈಸ್ತವದಲ್ಲಿ ಮತ್ತೊಂದು ವಾಕ್ಯವನ್ನು ತೆಗೆದುಕೊಂಡು ನೋಡೋಣ. "ವೇದಗಳು ಅಪೌರುಷೇಯಗಳು**

**<u>ಅಂದರೆ ಮಾನವರಿಂದ ಕಲ್ಪಿಸಲ್ಪಟ್ಟಿರುವವು ಅಲ್ಲ. ವೇದಗಳು ಬ್ರಹ್ಮ ಮುಖೋದ್ಭಿಷ್ಟಗಳು. ಅಂದರೆ ಬ್ರಹ್ಮ (ಸೃಷ್ಠಿಕರ್ತ) ಬಾಯಿಂದ ಬಯಲ್ಪಟ್ಟಿರುವವೆಂದು ನಮ್ಮ ಹಿರಿಯರು, ಗುರುಗಳು ಪದೇಪದೇ ಹೇಳುತ್ತಿದ್ದಾರೆ?"</u>**

ವೇದಗಳು ಅಪೌರುಷೇಯಗಳು ಎಂಬ ಮಾತು ನೂರಕ್ಕೆ ನೂರರಷ್ಟು ಸತ್ಯ. ಆದರೆ ಈ ಪದವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಬಹಳಜನ ಪೂರ್ತಿಯಾಗಿ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆ. ಪುರುಷರು ಅಂದರೆ ಮನುಷ್ಯರೆಂದು, ಅಪೌರುಷ ಅಂದರೆ ಮನುಷ್ಯರು ಬರೆದಿರುವವು ಅಲ್ಲವೆಂದು ಅರ್ಥವನ್ನು ಹೇಳುತ್ತಿದ್ದಾರೆ. ಮನುಷ್ಯರು ಬರೆಯದಿದ್ದರೆ ಯಾರು ಬರೆದಿದ್ದಾರೆಂದು ಪ್ರಶ್ನಿಸದಂತೆ, ವೇದಗಳು ಬ್ರಹ್ಮಬಾಯಿಂದ ಮಾತನಾಡಿರುವ ವೆಂದು ಇಲ್ಲವೆ ಹೇಳಲ್ಪಟ್ಟಿರುವವೆಂದು ಗುರುಗಳು, ಹಿರಿಯರು, ಹೇಳಿದಹಾಗೆ ಮೇಲಿನ ವಾಕ್ಯದಲ್ಲಿ ಬರೆದಿದ್ದಾರೆ. ವಾಸ್ತವವಾಗಿ ಹಿರಿಯರು (ಜ್ಞಾನಿಗಳು) ಗುರುಗಳು ಹಾಗೆ ಹೇಳಿದ್ದರೆ, ನಿಜವಾಗಲು ಅವರು ಗುರುಗಳಲ್ಲ, ಹಿರಿಯರೂ ಅಲ್ಲವೆಂದು ಹೇಳಬಹುದು. ಏಕೆಂದರೆ! ಅಪೌರುಷೇಯಗಳು ಎನ್ನುವ ಮಾತಿಗೆ ಪುರುಷರು ಬರೆದಿರುವವು ಅಲ್ಲವೆಂದು, ಬ್ರಹ್ಮದೇವರು ಹೇಳಿರುವವೆಂದು ಹೇಳುವುದು ಪೂರ್ತಿ ತಪ್ಪಾಗುತ್ತದೆ. ಅಲ್ಲಿ ಅಪೌರುಷೇಯಗಳು ಎನ್ನುವ ಮಾತಿನಲ್ಲಿ ವಿವರನ್ನು ನೋಡಿದರೆ ಪುರುಷತ್ವ ಇಲ್ಲದಿರುವವು ಎಂದು ಅರ್ಥವಿದೆ. ಪುರುಷತ್ವ ಅಂದರೆ ಏನು? ಪುರುಷತ್ವ ಇಲ್ಲದಿದ್ದರೆ ಅದರಲ್ಲಿ ಏನಿದೆ? ಎಂದು ಕೇಳಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ.

ಸೃಷ್ಠಿಯನ್ನು ಆದಿಯಲ್ಲಿ ಸೃಷ್ಠಿಸಿದವನು ದೇವರು. ಆದ್ದರಿಂದ ಸೃಷ್ಠಿಸಿದವನು ಪುರುಷನು ಎಂದು, ಸೃಷ್ಠಿಸಲ್ಪಟ್ಟ ಪ್ರಕೃತಿ ಸ್ತ್ರೀತತ್ತ್ವ ಹೊಂದಿದೆ ಎಂದು ಮೂರ್ಖವಾಗಿ ಹೇಳಬಹುದು. ಧರ್ಮಶಾಸ್ತ್ರವನ್ನು ಅನುಸರಿಸಿ ಹೇಳಿದರೆ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗ ಯೋಗ ಎನ್ನುವ ಅಧ್ಯಾಯದಲ್ಲಿ ಪ್ರಕೃತಿಯಿಂದ ತಯಾರಾದ ಶರೀರ ಸ್ತ್ರೀತತ್ತ್ವ ಎಂದೂ,

ಪ್ರಕೃತಿ ಸ್ತ್ರೀ ಎಂದೂ, ದೇವರಾದ ತಾನು ಪುರುಷನೆಂದೂ, ಪುರುಷನಾದ ತನಗೂ ಸ್ತ್ರೀ ಆದ ಪ್ರಕೃತಿಗು ಹುಟ್ಟಿದವರೇ ಸಮಸ್ತ ಜೀವರಾಶಿಗಳೆಂದೂ ಆದ್ದರಿಂದ ಸಮಸ್ತ ಜೀವರಾಶಿಗಳಿಗೆ ಪ್ರಕೃತಿ ತಾಯಿ ಎಂದೂ, ದೇವರಾದ ತಾನು ತಂದೆ ಎಂದೂ ಹೇಳಿದ್ದಾನೆ. ಇಲ್ಲಿ ದೇವರು ತನ್ನನ್ನು ತಾನು ಪುರುಷನೆಂದು ಹೇಳಿಕೊಳ್ಳುವುದು ನಡೆದಿದೆ. ನಂತರ ಪಕ್ಕದ ಅಧ್ಯಾಯವಾದ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ ಶರೀರದಲ್ಲಿರುವ ಜೀವಾತ್ಮ ದೇವರ ಅಂಶ ಇರುವವನಾದ್ದರಿಂದ ಕ್ಷರ ಪುರುಷನೆಂದು, ಆತ್ಮ ಅಕ್ಷರ ಪುರುಷನೆಂದು ಹೇಳಿ, ತನ್ನನ್ನು ಜೀವಾತ್ಮ ಆತ್ಮಗಳಿಗಿಂತ ಉತ್ತಮನಾಗಿ ಹೇಳುತ್ತಾ, ಜೀವಾತ್ಮ, ಆತ್ಮಗಳೆಂಬ ಇಬ್ಬರು ಪುರುಷರಿಗಿಂತ ಉತ್ತಮ ಪುರುಷನಾದ್ದರಿಂದ ತನ್ನನ್ನು ಪುರುಷೋತ್ತಮನೆಂದು ಹೇಳುವರು ಎಂದು ಸ್ವತಃ ದೇವರೇ ಹೇಳುವುದು ನಡೆದಿದೆ ಆದ್ದರಿಂದ ಪ್ರಕೃತಿ ವಿಷಯಗಳು ಎಲ್ಲಿದ್ದರೂ ಅವುಗಳನ್ನು ಸ್ತ್ರೀತತ್ತ್ವ ವಿಷಯಗಳಾಗಿ, ಹಾಗೆಯೇ ದೇವರ ವಿಷಯಗಳು ಎಲ್ಲಿದ್ದರೂ ಅವುಗಳನ್ನು ಪುರುಷತ್ವ ವಿಷಯಗಳಾಗಿ ಹೇಳಬಹುದು. ಪುರುಷನು ಎಂದರೆ ಆಧ್ಯಾತ್ಮಿಕ ಅರ್ಥದಿಂದ ದೇವರೆಂದು ಅರ್ಥ ಇರುವುದರಿಂದ ದೈವ ಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರ್ಆನ್ ಗ್ರಂಥಗಳು ಪುರುಷತ್ವದಿಂದ ಕೂಡಿಕೊಂಡಿರುವವು ಆಗಿರುವುದರಿಂದ ಅವುಗಳನ್ನು ಪೌರುಷಗಳೆಂದು, ಪ್ರಕೃತಿ ವಿಷಯಗಳಿಂದ ಕೂಡಿಕೊಂಡ ವೇದಗಳನ್ನು ಪುರುಷತ್ವವಿಲ್ಲದ ಅಪೌರುಷಗಳೆಂದು ಹೇಳಲ್ಪಟ್ಟಿವೆ. ಪೌರುಷಗಳೆಂದರೆ ಪರಮಾತ್ಮತತ್ತ್ವದಿಂದ ಕೂಡಿಕೊಂಡಿರುವವೆಂದೂ, ಅಪೌರುಷಗಳೆಂದರೆ, ಪ್ರಕೃತಿ ತತ್ತ್ವದಿಂದ ಕೂಡಿ ಕೊಂಡಿರುವವೆಂದೂ ಅರ್ಥ ಮಾಡಿಕೊಳ್ಳಬೇಕು.

ದೇವರು ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗ ಯೋಗದಲ್ಲಿ ಪ್ರಕೃತಿ ಪುರುಷರನ್ನು ಕುರಿತು ಪೂರ್ತಿ ವಿವರವಾಗಿ ಹೇಳಿರುವುದರಿಂದ, ಅಪೌರುಷೇಯಗಳು ಎಂದರೆ ಪುರುಷತ್ತ್ವ ಇಲ್ಲದಿರುವವೆಂದೂ, ದೈವಜ್ಞಾನ ಇಲ್ಲದಿರುವವೆಂದೂ ಹೇಳಬಹುದು. ವೇದಗಳಲ್ಲಿ ಪ್ರಕೃತಿ ಜನಿತವಾದ ಮೂರು

ಗುಣಗಳ ವಿಷಯಗಳು ಇರುವುದರಿಂದ, ಅವುಗಳನ್ನು ದೈವತ್ವ ಇಲ್ಲದಿರುವವೆಂದು ತಿಳಿಯುವುದಕ್ಕೆ ವೇದಗಳು ಅಪೌರುಷಗಳೆಂದು ಹೇಳುವುದು ನಡೆದಿದೆ. ಅಸಲಾದ ಅರ್ಥ ಹೀಗಿರುವಾಗ, ವೇದಗಳನ್ನು ಮನುಷ್ಯರು ಹೇಳಲಿಲ್ಲ. ಬ್ರಹ್ಮನೇ ಸ್ವತಃವಾಗಿ ಹೇಳಿದ್ದಾನೆಂದು ಕಲ್ಪಿಸಿದ ತಪ್ಪು ಅರ್ಥದಿಂದ ಹೇಳಿದರೂ, ವಾಸ್ತವಕ್ಕೆ ಅವುಗಳನ್ನು ಮನುಷ್ಯರೇ ಬರೆದಿದ್ದಾರೆ. ಯಾವ ಬ್ರಹ್ಮ ಸ್ವತಃವಾಗಿ ವೇದಗಳನ್ನು ಹೇಳಲಿಲ್ಲ.

ವೇದಗಳು ನಾಲ್ಕು ಒಂದೇ ದೇವರನ್ನು ಮೇಲ್ನೋಟಕ್ಕೆ ಹೇಳಿ, ಹೆಚ್ಚಾಗಿ ಉಳಿದ ದೇವತೆಗಳೆಲ್ಲರನ್ನು ಹೇಳುವುದು ನಡೆದಿದೆ. ಯಾವ ದೇವರಿಗೆ ಯಾವ ಪೂಜೆ ಮಾಡಬೇಕೊ, ಯಾವ ಪೂಜೆ ಹೇಗೆ ಮಾಡಬೇಕೋ ಹೇಳುತ್ತಾ, ಮನುಷ್ಯನಿಗೆ ಉಳಿದ ದೇವತೆಗಳೆಲ್ಲರನ್ನು ಪರಿಚಯ ಮಾಡಿರುವವು ನಾಲ್ಕು ವೇದಗಳೆಂದು ಹೇಳಬಹುದು. ಮೂರು ದೈವ ಗ್ರಂಥಗಳಲ್ಲಿ ಒಂದೇ ದೇವರನ್ನು ಕುರಿತು ಹೇಳಿದಾಗ, ವೇದಗಳು ಒಟ್ಟು ಸಮಸ್ತ ದೇವತೆಗಳನ್ನು, ಅವರ ಆರಾಧನೆಗಳನ್ನು ಕುರಿತು ತಿಳಿಸುವುದು ನಡೆದಿದೆ. ಹಿಂದೂ ಮತದಲ್ಲಿನ ವೇದಗಳು ದ್ವಾಪರಯುಗ ಕೊನೆಯಲ್ಲಿ ಭಗವದ್ಗೀತೆಗಿಂತ ಮೊದಲು ತಯಾರಾಗಿವೆ. ಅಲ್ಲಿಯವರೆಗು ವಿಶ್ವವ್ಯಾಪ್ತವಾಗಿರುವ ಹಿಂದೂಸಮಾಜ ಹಿಂದೂಮತವಾಗಿ ಬದಲಾಗಿಹೋಗಿದೆ. ವೇದಗಳು ತಯಾರಾಗುವುದರಿಂದ ಇಂದೂ ಸಮಾಜ ಹಿಂದೂಮತವಾಗಿ ಬದಲಾಗುವುದು ನಡೆದಿದೆ. ನಂತರ ಹಿಂದಿಂದೆ ಉಳಿದ ಮತಗಳು ಹುಟ್ಟಿಬಂದಿವೆ. ಒಂದು ವಿಧವಾಗಿ ಇಂದೂ (ಹಿಂದೂ) ಸಮಾಜದಲ್ಲಿನ ಏಕತ್ವವನ್ನು ಭಿನ್ನಗೊಳಿಸಿರುವವು ವೇದಗಳೇ ಎಂದು ಹೇಳಬಹುದು. ವೇದಗಳನ್ನು ಅನೇಕ ಋಷಿಗಳಿಂದ ಶೇಖರಿಸಿ ಕೂರಿಸಿ, ಅವರು ಬರೆದಿರುವುದನ್ನನುಸರಿಸಿ ತಾನು ಸ್ವಲ್ಪ ಬರೆದು, ವ್ಯಾಸನು ವೇದಗಳನ್ನು ಗ್ರಂಥರೂಪ ಮಾಡಿದ್ದಾನೆ. ಆ ದಿನ ಎಷ್ಟೋ ಜನ ಋಷಿಗಳು ಹೇಳಿರುವುದೆಲ್ಲಾ ಜ್ಞಾನವೆ ಎಂದು ನಂಬಿದ ವ್ಯಾಸನು ಅದೇ ದಾರಿಯಲ್ಲಿ ತಾನೂ ಸ್ವಲ್ಪ ಬರೆಯುವುದಲ್ಲದೆ, ಶೇಕರಿಸಿರುವುದನ್ನು, ತಾನು ಬರೆದಿರುವುದನ್ನು ಎಲ್ಲವನ್ನು ಸೇರಿಸಿ ವ್ಯಾಸನು ನಾಲ್ಕು ವೇದಗಳಾಗಿ ಗ್ರಂಥ ರೂಪ ಮಾಡಿದ್ದಾನೆ. ನಂತರ

ಸ್ವಲ್ಪ ಕಾಲದಲ್ಲಿಯೇ ಭಗವಂತನಾದ ಶ್ರೀಕೃಷ್ಣನು ಹೇಳಿದ ಭಗವದ್ಗೀತೆ ಸಮಾಚಾರ ಅರ್ಜುನನ ಮೂಲಕ ವ್ಯಾಸನಿಗೆ ತಿಳಿದಿದೆ. ಅರ್ಜುನನು ಕೇಳಿರುವುದನ್ನು ಹೇಳಿದಾಗ, ಅದನ್ನು ಕೇಳಿದ ವ್ಯಾಸನು ದೇವರ ಜ್ಞಾನಕ್ಕೆ ಆಶ್ಚರ್ಯಪಟ್ಟು, ತಾನು ವೇದಗಳು, ಪುರಾಣಗಳು ಬರೆದು ತಪ್ಪು ಮಾಡಿದ್ದೇನೆಂದು ತಿಳಿದು, ಅದಕ್ಕೆ ಪ್ರಾಯಶ್ಚಿತ್ತವಾಗಿ ಬಾಧೆಪಟ್ಟಿರುವುದೇ ಅಲ್ಲದೆ, ದೇವರು ಭಗವಂತನಾಗಿ ಹೇಳಿದ ಜ್ಞಾನವನ್ನು ಪ್ರಜೆಗಳಿಗೆ ತಿಳಿಸಬೇಕೆಂದು ಭಗವದ್ಗೀತೆಯನ್ನು ಗ್ರಂಥರೂಪವಾಗಿ ಬರೆದುಕೊಟ್ಟಿದ್ದಾನೆ. ವೇದಗಳನ್ನು ಬರೆದ ವ್ಯಾಸನೇ ತಾನು ತಪ್ಪು ಮಾಡಿದ್ದೇನೆಂದು ತಿಳಿದು ಆ ತಪ್ಪಿನಿಂದ ಹೊರಬೀಳುವುದಕ್ಕೆ ಭಗವದ್ಗೀತೆ ಯನ್ನು ಬರೆದು ಕೊಟ್ಟರೆ, ಈಗಿನ ಪ್ರಜೆಗಳಲ್ಲಿ ಕೆಲವರು ಭಗವದ್ಗೀತೆನ್ನು ಬಿಟ್ಟು ವೇದಗಳನ್ನು ಹೊಗಳುವುದು ಏನನ್ನಬಹುದೊ ನೀವೇ ಆಲೋಚಿಸಿರಿ. ವೇದಗಳಿಗೆ ವಿರುದ್ಧವಾಗಿರುವ ಭಗವದ್ಗೀತೆಯನ್ನು ವ್ಯಾಸನು ಏಕೆ ಬರೆದಿದ್ದಾನೊ, ವ್ಯಾಸನೇ ತನ್ನ ಬರಹದಲ್ಲಿ ವೇದಗಳು ಗುಣ ಸಮ್ಮೇಳನಗಳೆಂದು, ವೇದಗಳು ಮಾಯೆ ಎಂದು, ವೇದ ಸಹಿತವಾದ ಮಾಯೆಯನ್ನು ದೈವಜ್ಞಾನ ಇಲ್ಲದಿರುವವರು ಯಾರೂ ದಾಟಲಾರರೆಂದು ವ್ಯಾಸನು ಏಕೆ ಹೇಳಿದ್ದಾನೊ, ಕೆಲವರಾದರೂ ಸ್ವಲ್ಪವಾದರೂ ಯೋಚಿಸದೆ ಕುರುಡರಂತೆ ವೇದಗಳನ್ನು ಹೊಗಳುವುದು ಜ್ಞಾನ ಅನ್ನಬಹುದೊ, ಅಜ್ಞಾನ ಅನ್ನಬಹುದೊ ನೀವೇ ನಿರ್ಣಯಿಸಿಕೊಳ್ಳಿ.

'ಹೈಂದವ ಕ್ರೈಸ್ತ' ಎನ್ನುವ ಗ್ರಂಥದಲ್ಲಿ ಹಿಂದೂಗಳನ್ನು ಯಮಾರಿ ಸುವುದಕ್ಕೆ ಎಷ್ಟೋ ವಿಷಯಗಳನ್ನು ವೇದಗಳಿಂದ ತೆಗೆದು ತೋರಿಸಿದ್ದಾರೆ. ಹಾಗೆ ತೋರಿಸುತ್ತಾ ಕೊನೆಗೆ ಕ್ರೈಸ್ತವವನ್ನು ಸಾರಿ ಹೇಳಬೇಕೆನ್ನುವುದೇ ಅವರ ಉದ್ದೇಶ. ಅವರ ಉದ್ದೇಶವೆಲ್ಲಾ ಒಟ್ಟು ಮತದ ಮೇಲೆ ಆಧಾರವಾಗಿದೆ. ಆ ವಿಧಾನದಲ್ಲಿ ಬೋಧಿಸುತ್ತಾ, ಯೇಸು ಮರಣಿಸಿ ಮತ್ತೆ ಅದೇ ಶರೀರದಿಂದ ಎದ್ದಿದ್ದಾನೆಂದು, ಅದನ್ನೇ ಪುನರುತ್ಥಾನ ಎನ್ನುತ್ತಿದ್ದೇವೆಂದು, ಇಂದ್ರನೇ ಆ ವಿಧವಾಗಿ ಯೇಸುವಾಗಿ ಹುಟ್ಟಿ ತನ್ನ ಮಹಿಮೆಯನ್ನು ಹಾಗೆ ತೋರಿದ್ದಾನೆಂದು

ಬರೆದಿದ್ದಾರೆ. ತಾವು ತಮ್ಮ ಮತವನ್ನು ಪ್ರಚಾರ ಮಾಡಿಕೊಳ್ಳುವುದಕ್ಕೆ ನಮ್ಮ ಲೆಕ್ಕದಲ್ಲಿ ಭಗವಂತನಾದ ಯೇಸುವನ್ನು ಕೊನೆಗೆ ಇಂದ್ರನಾಗಿ ಹೇಳುವುದು ಸಮಂಜಸವೇನಾ? ಎಂದು ಕೇಳುತ್ತಿದ್ದೇವೆ. ನಮಗೆ ತಿಳಿದು ಇಲ್ಲಿಯವರೆಗೂ ಪ್ರಪಂಚದಲ್ಲಿ ಎರಡುಸಲ ಗ್ರಹಗಳು ದೇವರ ಜ್ಞಾನವನ್ನು ಹೇಳಿದಾಗ, ಎರಡುಸಲ ಭಗವಂತನು ಜ್ಞಾನವನ್ನು ಹೇಳಿದ್ದಾನೆ. ಯಾರಾದರೆ ಶ್ರೀಕೃಷ್ಣನಾಗಿ ಭಾರತ ದೇಶದಲ್ಲಿ ಬಂದಿದ್ದಾನೊ, ಆತನೇ ಯೇಸು ಆಗಿ ಇಜ್ರಾಯೇಲ್ ದೇಶದಲ್ಲಿ ಬರುವುದು ನಡೆದಿದೆ. ದೇವರೇ ಭಗವಂತನಾಗಿ ಎರಡು ಬಾರಿ ಎರಡು ಹೆಸರುಗಳಿಂದ ಬಂದು ತನ್ನ ಜ್ಞಾನವನ್ನು ಹೇಳಿಹೋದರೆ, ಆತನು ಯಾರೋ ತಿಳಿಯದವರು ಇಂದ್ರನಾಗಿ ಹೋಲಿಸಿ ಹೇಳುವುದು ದೇವರನ್ನು ಅಗೌರವಪಡಿಸಿದಂತೆ ಅಲ್ಲವೆ ಎಂದು ಪ್ರಶ್ನಿಸುತ್ತಿದ್ದೇನೆ. ಒಂದು ವಿಧವಾಗಿ ಯೇಸುವಿನ ಮಹಿಮೆಯನ್ನು ಸಾರಿ ಹೇಳಿ ಹಿಂದೂಗಳನ್ನು ಆಕರ್ಷಿಸಬೇಕೆಂದು ಕೊಂಡು ಮಾಡಿದ ಪ್ರಯತ್ನದಲ್ಲಿ, ಇವರು ಕ್ರೈಸ್ತವ ಮತಕ್ಕೋಸ್ಕರ ಯೇಸುವನ್ನು ಸಹ ಮಾರುವಂತಿದ್ದಾರೆಂದು, ಬಜಾರಿನಲ್ಲಿ ಹರಾಜಿಗೆ ಹಾಕುವಂತಿದ್ದಾರೆಂದು ತಿಳಿಯುತ್ತದೆ. ಆ ವಿಧಾನ ಹೇಗಿದೆಯೋ ಎಲ್ಲರಿಗೂ ತಿಳಿಯುವುದಕ್ಕೆ 'ಹೈಂದವ ಕ್ರೈಸ್ತವ' ಎನ್ನುವ ಗ್ರಂಥದಲ್ಲಿ 44, 45 ಪೇಜಿಗಳಲ್ಲಿನ ವಿಷಯವನ್ನು ಇರುವುದು ಇದ್ದಂತೆ ತೋರಿಸುತ್ತಿದ್ದೇವೆ ನೋಡಿರಿ.

**"ಪುನರ್ಜನ್ಮಗಳಿವೆ ಎಂದು ಭಾರತೀಯ ಸಮಾಜ ಸಾವಿರಾರು ವರ್ಷಗಳಿಂದ ನಂಬುತ್ತಿದೆ. ಪ್ರತಿ ಜೀವಿಗು ಪುನರ್ಜನ್ಮ ಸಹಜವೆಂದು ನಂಬಿದಾಗ, ಇನ್ನು ಇಂದ್ರನು ಮರಣಿಸಿ ಪುನರ್ಜನ್ಮ ಎತ್ತುವುದರಲ್ಲಿ ಇಂದ್ರನ ಮಹಿಮೆ ಏನಿದೆ? ಇಂದ್ರನ ಮಹತ್ವ ಏನಿದೆ?**

**ಎಲ್ಲರೂ ಸತ್ತು, ಪುನಃ ಇನ್ನೊಂದು ಮಾತೃಗರ್ಭದಲ್ಲಿ ಜನ್ಮಿಸುವುದು ಸಾಧಾರಣವಾದ ವಿಷಯ ಅಂದುಕೊಳ್ಳುತ್ತಿದ್ದಾರೆ ಆದ್ದರಿಂದ, ಅದಕ್ಕೆ ಭಿನ್ನವಾದುದು ಇಂದ್ರನು ಮಾಡಿ ತೋರಿಸಬೇಕು. ಆಗಲೇ ನಾವು ಇಂದ್ರನ ಮಹತ್ವವನ್ನು ನೋಡಬಲ್ಲೆವು.**

**ಮರಣಿಸಿದ ನಂತರ ಇಂದ್ರನು ತನ್ನ ಮಹಿಮೆಯನ್ನು ತೋರಿಸಬೇಕೆಂದರೆ ಏನು ಮಾಡಬೇಕು? ಮತ್ತೆ ಎಲ್ಲಿಯೊ, ಯಾರೂ ಗುರುತು ಹಿಡಿಯುವುದಕ್ಕೆ ಸಾಧ್ಯವಿಲ್ಲದಂತೆ ಇನ್ನೊಂದು ಅಮ್ಮನ ಹೊಟ್ಟೆಯಲ್ಲಿ ಹುಟ್ಟುವುದಲ್ಲ. ಇಂದ್ರನು ಮರಣಿಸಿ ಮತ್ತೆ ಅದೇ ಶರೀರದಿಂದ ಏಳಬೇಕು. ಅದನ್ನು ಪುನರುತ್ಥಾನ ಎನ್ನುತ್ತಾರೆ.**

**ಸ್ವಲ್ಪ ನಾವು ಇಂಗಿತ ಜ್ಞಾನವನ್ನು ಉಪಯೋಗಿಸಿ ಆಲೋಚಿಸಿದರೆ ಮರಣಿ ಪುನಃ ಮತ್ತೊಂದು ಗರ್ಭದಿಂದ ಹುಟ್ಟುವುದು ಪ್ರಾಣಿಕೋಟಿಗೆ ಸರ್ವಸಹಜವೆಂದು ಭಾರತ ಸಮಾಜ ನಂಬುತ್ತಿರುವ ಕಾರಣ, ಇಂದ್ರನ ಮಹಿಮೆಯನ್ನು ನಾವು ನೋಡಬೇಕು ಎಂದರೆ ( ನೋಡಿರಿ ಎನ್ನುತ್ತದೆ ವೇದ) ಇಂದ್ರನು ಮರಣಿಸಿ ಮತ್ತೆ ಅದೇ ಶರೀರದಿಂದ ಮರಣವನ್ನು ಜಯಿಸಿ ಏಳಬೇಕು. ಮತ್ತೆ ಪುನರುತ್ಥಾನನು ಆಗಬೇಕು.**

**ಆತನೇ ಸೂರ್ಯನು, ಆತನೇ ಅಗ್ನಿ, ಆತನೇ ಅನ್ನ. ಆತನು ಮರಣಿಸಿ ಎದ್ದವನು. ಆತನು ಸೃಷ್ಟಿಗೆ ಪೂರ್ವದಲ್ಲಿ ಒಂದುಬಾರಿ ಯಜ್ಞವಾಗಿದ್ದಾನೆ. ಸೃಷ್ಟಿ ನಡೆದ ನಂತರ ಮನುಷ್ಯನಾಗಿ ಮತ್ತೊಂದು ಸಲ ಯಜ್ಞವಾಗಿದ್ದಾನೆ. ಮರಣಿಸಿ ಎದ್ದು ತನ್ನ ಮಹಿಮೆಯನ್ನು ತೋರಿಸಿದ್ದಾನೆ.**

ಇಲ್ಲಿಯವರೆಗೂ ಬರೆದ ವಾಕ್ಯಗಳೆಲ್ಲ ನೋಡಿದ್ದೀರಾ ಅಲ್ಲವೆ! ಈ ಗ್ರಂಥಕರ್ತ ಯೇಸುನನ್ನು ದೊಡ್ಡದಾಗಿ ಹೇಳಬೇಕೆಂಬ ಪ್ರಯತ್ನ ಮಾಡುವುದು ನಮಗೂ ಸಹ ಸಂತೋಷವೇ. ಆದರೆ ಆ ಪ್ರಯತ್ನದಲ್ಲಿ ವೇದಗಳನ್ನು ಉಪಯೋಗಿಸಿ ಹೇಳಿ ಯೇಸುನನ್ನು ಸಾಮಾನ್ಯ ಮಾನವನ ಸ್ಥಿತಿಗೆ ಇಳಿಸಿದ್ದಾನೆ. ಒಂದು ವಿಧವಾಗಿ ಇದು ತಿಳಿಯದೆ ಮಾಡಿದ ತಪ್ಪೆಂದು ನಮಗು

ಅರ್ಥವಾಗುತ್ತಿದೆ. ಆದರೆ ತಾನು ಮಾಡಿದ ತಪ್ಪೇನೊ ಗ್ರಂಥಕರ್ತರಿಗೆ ಇಲ್ಲಿಯವರೆಗೂ ತಿಳಿದಿಲ್ಲವೆಂದೇ ಅಂದುಕೊಳ್ಳುತ್ತಿದ್ದೇನೆ. ಇದಕ್ಕೆಲ್ಲ ಕಾರಣ ಮತದ ಮೇಲೆ ಮಮಕಾರ ಹೊರತು ಮತ್ತೇನು ಅಲ್ಲವೆಂದು ಹೇಳಬಹುದು. ಯೇಸು ಮರಣಿಸಿ ಪುನಃ ಅದೇ ಶರೀರದಿಂದ ಎದ್ದಿರುವ ಮಾತು ನಿಜವೆ. ಕ್ರೈಸ್ತರಿಗೆಲ್ಲ ಅದೇ ದೊಡ್ಡಕಾರ್ಯವಾಗಿ ಕಾಣಿಸುತ್ತದೆಯೆಂದುಕೊಳ್ಳುತ್ತೇನೆ.

ಬಹಳಜನ ಕ್ರೈಸ್ತರು ನಮ್ಮ ದೇವರು ಹೊರತು ಮತ್ತೆ ಯಾವ ಇತರ ಮತಸ್ಥರ ದೇವರುಗಳಾದರು ಮರಣಿಸಿ ಪುನಃ ಅದೇ ಶರೀರದೊಂದಿಗೆ ಎದ್ದಿದ್ದಾರಾ? ಎಂದು ಪ್ರಶ್ನಿಸುತ್ತಿದ್ದಾರೆ. ಮತ್ತೆ ಅದೇ ಶರೀರದಿಂದ ಮರಣದಿಂದ ಎದ್ದವನೇ ನಿಜವಾದ ದೇವರೆಂದು ಕೆಲವರು ಕ್ರೈಸ್ತರು ಅನ್ನುತ್ತಿದ್ದಾರೆ. ಇಲ್ಲಿ ಇಂದ್ರನೇ ಯೇಸು ಎನ್ನುವ ಮನುಷ್ಯನಾಗಿ ಹುಟ್ಟಿ ತನ್ನ ಮಹತ್ಯವನ್ನು ತೋರಿಸುವುದಕ್ಕೆ, ಆ ವಿಧವಾಗಿ ಮರಣಿಸಿದ ನಂತರ ಮರಣವನ್ನು ಜಯಿಸಿ ಪುನರುತ್ಥಾನನಾಗಿದ್ದಾನೆಂದು ಹೇಳುತ್ತಿದ್ದಾರೆ. ಯೇಸು ಯಾರೋ ಸರಿಯಾಗಿ ಗುರುತಿಸಲಾರದ ಕ್ರೈಸ್ತರು ಹಾಗೆ ಆತನನ್ನು ಇಂದ್ರನೆನ್ನುವುದು ಬಹಳ ದೊಡ್ಡ ತಪ್ಪು. ಯೇಸುನನ್ನು ನೋಡಿ ಇಂದ್ರನೆನ್ನುವುದು ಚಕ್ರವರ್ತಿಯನ್ನು ನೋಡಿ ಪೌರಾಣಿಕ ನಟನು ಎನ್ನುವಂತಿದೆ. ಯೇಸುವನ್ನು ಇಂದ್ರನಿಗೆ ಹೋಲಿಸುವುದರಿಂದ ಯೇಸು ಎಂತಹವನೋ, ಎಷ್ಟು ಶಕ್ತಿ ಇರುವವನೋ ತಿಳಿಯದೆ ಹಾಗೆ ಹೇಳಿ ದ್ದಾರೆಂದುಕೊಳ್ಳುತ್ತಿದ್ದೇವೆ. ಯೇಸುನನ್ನು ಇಂದ್ರನನ್ನಾಗಿ ಹೋಲಿಸಿ ದೊಡ್ಡದಾಗಿ ಹೇಳಿಕೊಂಡಂತೆ ಅಂದುಕೊಂಡವರು, ಮರಣದಿಂದ ಪುನಃ ಅದೇ ಶರೀರದಿಂದ ಎದ್ದಿದ್ದಾನೆಂದು, ಹಾಗೆ ಎದ್ದಿರುವುದರಿಂದ ಯೇಸು ದೊಡ್ಡವನೆಂದು ಹೇಳುವುದು ಸಹ, ಆತನನ್ನು ಅವರಿಗೆ ತಿಳಿಯದೇನೆ ಕಡಿಮೆಮಾಡಿ ಮಾತನಾಡಿದಂತಾಗಿದೆ.

ಇಲ್ಲಿ ನಾನು ಒಂದು ವಿಷಯವನ್ನು ಹೇಳುತ್ತೇನೆ ಅದನ್ನು ಕುರಿತು ನೀವು ಸ್ವಲ್ಪ ಆಲೋಚಿಸಿರಿ. ಆಗ ನೀವು ಪುನರುತ್ಥಾನ ದೊಡ್ಡದೆನ್ನುವುದು ಸರಿಯಾದುದೋ, ಅಲ್ಲವೋ ಸ್ವಲ್ಪಮಟ್ಟಿಗೆ ನಿಮಗೆ ಅರ್ಥವಾಗುತ್ತದೆ. ಯೇಸು ತನ್ನ ಜೀವನದಲ್ಲಿ ಮೂವತ್ತು ವರ್ಷಗಳ ನಂತರ ಮೂರು ವರ್ಷಗಳು ಜ್ಞಾನವನ್ನು

ಪ್ರಜೆಗಳಿಗೆ ಬೋಧಿಸಿದ್ದಾನೆ. ಆ ಸಮಯದಲ್ಲಿ ಒಂದುಕಡೆ ಒಬ್ಬ ಬಾಲಕಿ ಮರಣಿಸಿದಳೆಂದು ಕೆಲವರು ಅಳುತ್ತಿರುವಾಗ ಅದನ್ನು ನೋಡಿ, ಏಕೆ ರೋಧಿಸುತ್ತಿದ್ದೀರೆಂದು ಯೇಸು ಅವರನ್ನು ಕೇಳಿದನು. ಆಗ ಅವರು ತಮ್ಮ ಮನೆಯಲ್ಲಿ ಒಬ್ಬ ಬಾಲಕಿ ಮರಣಿಸಿದ್ದಾಳೆಂದು, ಆ ವೇದನೆ ತಾಳಲಾರದೆ ಅಳುತ್ತಿದ್ದೇವೆಂದು ಹೇಳಿ ಶವಯಾತ್ರೆಗೆ (ಅಂತ್ಯಕ್ರಿಯೆಗಳಿಗೆ) ತಯಾರಾಗುತ್ತಿರುವಾಗ, ಯೇಸು ಅವರನ್ನು ನೋಡಿ ನಿಮ್ಮ ಬಾಲಿಕಿ ಮರಣಿಸಲಿಲ್ಲ, ನೀವು ಮರಣಿಸಿದ್ದಾಳೆಂದು ತಪ್ಪಾಗಿ ತಿಳಿದಿದ್ದೀರೆಂದು ಹೇಳಿ, ಅವರ ಮನೆಯೊಳಗೆ ಹೋಗಿ ಆ ಬಾಲಕಿಯನ್ನು ತಟ್ಟಿ ಕೈ ಹಿಡಿದುಕೊಂಡು ಎದ್ದೇಳು ಅಂದಾಗ, ಆ ಬಾಲಕಿ ಸಜೀವವಾಗಿ ಎದ್ದಳು. ಆಗ ಅಲ್ಲಿರುವವರೆಲ್ಲರೂ ಆ ಸಂಘಟನೆಯನ್ನು ನೋಡಿ ಆಶ್ಚರ್ಯಪಟ್ಟಿದ್ದಾರೆ. ಮರಣಿಸಿದ ಬಾಲಕಿಗೆ ಪ್ರಾಣಕೊಟ್ಟ ಯೇಸುನನ್ನು ದೇವರೆಂದು ಅಂದುಕೊಳ್ಳುವುದು ನಡೆದಿದೆ. ಇದೇ ರೀತಿ ಮತ್ತೊಂದುಕಡೆ ಲಾಜರ್ ಎನ್ನುವ ವ್ಯಕ್ತಿಯನ್ನು ಲಾಜರ್ ಎದ್ದು ಬಾ! ಎಂದು ಕರೆದು ಆತನನ್ನು ಮರಣದಿಂದ ಏಳಿಸಿದ್ದಾನೆ. ಯೇಸು ಎರಡು ಕಡೆ ಅವರು ಮರಣಿಸಲಿಲ್ಲ ಎಂದು ಹೇಳಿ ಇಬ್ಬರನ್ನು ಏಳಿಸುವುದು ನಡೆದಿದೆ ಅಲ್ಲವೆ! ಆ ವಿಷಯವನ್ನು ನಾವು ಬೈಬಲ್‌ನಲ್ಲಿ ಸಹ ಓದಿದ್ದೇವೆ.

ಇಲ್ಲಿ ನಾವು ಹೇಳುವ ಮುಖ್ಯ ವಿಷಯವೇನೆಂದರೆ! ಯೇಸು ಕರೆದ ಮಾತ್ರಕ್ಕೆ ಮರಣಿಸಿದವರು ಪುನಃ ಅದೇ ಶರೀರದಿಂದ ಎದ್ದಿದ್ದಾರೆ ಅಲ್ಲವೆ! ಅದು ಪುನರುತ್ಥಾನ ಅಲ್ಲವೆ! ಮರಣಿಸಿದವನು ಮತ್ತೆ ಶರೀರದಿಂದ ಎದ್ದರೆ. ಅದು ಪುನರುತ್ಥಾನವೇ ಆಗುತ್ತದೆ. ಯೇಸುಪ್ರಭುವು ಮರಣದಿಂದ ಎದ್ದಾಗ ಅದು ಮಹತ್ವವಾದಾಗ, ದೊಡ್ಡಕಾರ್ಯವಾದಾಗ, ಯೇಸು ಸಮಕ್ಷಮದಲ್ಲಿಯೇ ಎದ್ದವರನ್ನು ಏನನ್ನಬೇಕು? ಅದಕ್ಕೆ ಮರಣಿಸಿದವರು ಸ್ವತಃವಾಗಿ ಏಳಲಿಲ್ಲ ಯೇಸು ಪ್ರಭುವು ಎಬ್ಬಿಸಿದರೆ ಎದ್ದಿದ್ದಾರೆ. ಆದ್ದರಿಂದ ಹಾಗೆ ಎಬ್ಬಿಸಿದ ಯೇಸುವನ್ನು ದೊಡ್ಡವನೆನ್ನಬೇಕು. ಎದ್ದವರನ್ನು ದೊಡ್ಡವರೆನ್ನಬಾರದು ಎಂದು ಅನ್ನಬಹುದು. ಸರೀ ನಿಮಗೆ ಹಾಗೆ ಅರ್ಥವಾಗಿದೆ ಆದ್ದರಿಂದ ನಾವು ಅದನ್ನು

ಕುರಿತು ಏನು ಹೇಳಿದರೂ ಕೇಳುವುದಿಲ್ಲ. ಆ ವಿಷಯವನ್ನು ಹಾಗೆ ಬಿಟ್ಟು, ಮತ್ತೆ ಕೆಲವು ಕಡೆ ಭೂಮಿಮೇಲೆ ಮರಣಿಸಿದವರು ಕೆಲವು ದಿನಗಳ ನಂತರ ಎದ್ದಿರುವ ಅನೇಕ ಸಂಘಟನೆಗಳು ಇವೆ. ಅವುಗಳನ್ನು ಏನನ್ನಬೇಕು? ಅಲ್ಲಿ ಅವರನ್ನು ಯಾರೂ ಎಬ್ಬಿಸಲಿಲ್ಲವೆ, ಅವರಷ್ಟಕ್ಕೆ ಅವರು ಎದ್ದು ಬಂದಿದ್ದಾರೆ ಅಲ್ಲವೆ! ಅವರದು ಪುನರುತ್ಥಾನ ಅಲ್ಲವೆನ್ನುತ್ತೇವಾ? ಬಹುಶಃ ನಿಮ್ಮ ಹತ್ತಿರ ಉತ್ತರ ಇರುವುದಿಲ್ಲ ಅಂದುಕೊಳ್ಳುತ್ತೇನೆ.

ಒಬ್ಬ ಸಾಮಾನ್ಯ ಮನುಷ್ಯ ಬೆಳಗ್ಗೆ ಮರಣಿಸಿ ಸಾಯಂಕಾಲ ಎದ್ದಿರುವ ಸಂಘಟನೆಗಳು ಇವೆ. ಯೇಸು ಮೂವತ್ತುಮೂರು ಗಂಟೆಗಳ ನಂತರ ಮರಣದಿಂದ ಎದ್ದಾಗ, ಮತ್ತೊಬ್ಬನು ಹನ್ನೆರಡು ಗಂಟೆಗಳಿಗೆ ಮರಣದಿಂದ ಸಜೀವನಾಗಿ ಎದ್ದು ಕೂಳಿತಿದ್ದಾನೆ. ಅಂತಹದರಲ್ಲಿ ಯೇಸುಗಿಂತ ಮುಂಚೆಯೆ ಎದ್ದವನನ್ನು ಯೇಸುಗಿಂತ ದೊಡ್ಡವನೆಂದು ಅನ್ನಬೇಕಾ? ಹಾಗೆ ಪುನರುತ್ಥಾನ ಹೊಂದಿದ ಸಾಧಾರಣ ಮನುಷ್ಯರೊಳಗೆ ಯೇಸುನನ್ನು ಸೇರಿಸುವುದು ಭಾವ್ಯವಾ? ಎಂದು ಕೇಳುತ್ತಿದ್ದೇನೆ. ಭೂಮಿಮೇಲೆ ಸಕಲ ಜೀವರಾಶಿಗಳಿಗು ಮರಣಗಳು ಒಟ್ಟು ನಾಲ್ಕು ವಿಧಗಳು ಇವೆ. ಅದರಲ್ಲಿ ಕ್ರಮವಾಗಿ 1) ಕಾಲ ಮರಣ. 2) ಅಕಾಲ ಮರಣ, 3) ತಾತ್ಕಾಲಿಕ ಮರಣ, 4) ಕೊನೆಯ ಮರಣ ಎನ್ನುವವು ಇವೆ. ಸಾಧಾರಣವಾಗಿ ಎಲ್ಲರಿಗೂ ಮರಣ ಎನ್ನುವುದು ಮಾತ್ರ ತಿಳಿದಿದೆಯೇ ಹೊರತು, ಮರಣದಲ್ಲಿ ಇಷ್ಟು ಮರಣಗಳಿವೆ ಎಂದಾಗಲಿ, ಯಾರು ಯಾವ ಮರಣವನ್ನು ಹೊಂದುತ್ತಿದ್ದಾರೆಂದಾಗಲಿ, ಈಗಿನ ಮನುಷ್ಯರಿಗೆ ತಿಳಿಯದಹಾಗೆ ಹೋಗಿದೆ.

(ಮನುಷ್ಯನಿಗಿರುವ ನಾಲ್ಕು ಮರಣಗಳನ್ನು ಕುರಿತು ಸಂಪೂರ್ಣವಾಗಿ ತಿಳಿಯಬೇಕೆಂದರೆ ನಮ್ಮ ರಚನೆಯಲ್ಲಿನ **"ಮರಣ ರಹಸ್ಯ"** ಎನ್ನುವ ಗ್ರಂಥವನ್ನು ಓದಿರಿ.) ಒಬ್ಬ ಮನುಷ್ಯ ಮರಣಿಸಿದರೆ ಅವನಿಗೆ ಮರಣಬಂದಿದೆಯೆಂದು ತಿಳಿದು ಅಂತ್ಯಕ್ರಿಯೆಗಳು ಮಾಡುವುದು ಮಾತ್ರ ತಿಳಿದ ಮನುಷ್ಯರಿಗೆ, ನಾಲ್ಕು ವಿಧಗಳ ಮರಣಗಳಿವೆಯೆಂದು ತಿಳಿಯದೆಹೋಗಿರುವುದರಿಂದ, ಯೇಸುಪ್ರಭು

ವಿಷಯದಲ್ಲಿ ಸಹ ಬಹಳ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆಂದು ತಿಳಿಯುತ್ತಿದೆ. ನಾಲ್ಕು ಮರಣಗಳಲ್ಲಿ ಕೊನೆಯ ಮರಣ ಎನ್ನುವುದು ಬಹಳ ಅಪರೂಪವಾಗಿ ನಡೆಯುವುದು. ಮನುಷ್ಯ ದೇವರ ಜ್ಞಾನವನ್ನು ಪೂರ್ತಿಯಾಗಿ ತಿಳಿದು, ಆಚರಿಸಿ ಕರ್ಮವನ್ನು ಸುಟ್ಟುಕೊಂಡಾಗ, ಕರ್ಮ ಯಾವಮಾತ್ರ ಶೇಷ ಇಲ್ಲದಂತೆ ಮುಗಿದುಹೋದಾಗ, ಆತನು ಮತ್ತೆ ಜನ್ಮಿಸಬೇಕಾದ ಕೆಲಸವಿಲ್ಲ. ಆತನು ಪುನರ್ಜನ್ಮವನ್ನು ಹೊಂದದೆ ದೇವರಲ್ಲಿ ಐಕ್ಯವಾಗಿಹೋಗುತ್ತಾನೆ. ಅಂಥವನು ಮತ್ತೆ ಹುಟ್ಟುವುದಿಲ್ಲ, ಮರಣಿಸುವುದಿಲ್ಲ. ಆದ್ದರಿಂದ ಕರ್ಮರಾಹಿತ್ಯವಾದವನು, ಮೋಕ್ಷವನ್ನು ಹೊಂದುವವನು ಮರಣಿಸಿದಾಗ, ಅದು ಕೊನೆಯ ಮರಣವಾಗುತ್ತದೆ. ಯೇಸು ಹೊಂದಿರುವುದು ಕೊನೆಯ ಮರಣ ಅಲ್ಲವೆಂದು, ಕೊನೆಯ ಮರಣ ಹೊಂದಿದವನು ಮತ್ತೆ ಸಜೀವವಾಗಿ ಏಳುವುದಿಲ್ಲವೆಂದು ಹೇಳಬಹುದು.

ಮೂರನೆಯ ಮರಣವಾದ ತಾತ್ಕಾಲಿಕ ಮರಣವನ್ನು ಅಪರೂಪವಾಗಿ ಮನುಷ್ಯರು ಹೊಂದುತ್ತಿರುತ್ತಾರೆ. ಒಬ್ಬ ಮನುಷ್ಯ ಮರಣಿಸಿದರೆ ಮರಣದಲ್ಲಿ ಜೀವಾತ್ಮ(ಜೀವಿಯು) ಅವನೊಂದಿಗೆ ಇರುವ ಆತ್ಮ, ಕರ್ಮಗಳು ಶರೀರದಿಂದ ಹೊರಗೆ ಹೋಗದಂತೆ ಶರೀರದಲ್ಲಿಯೇ ಇರುವುದನ್ನು ತಾತ್ಕಾಲಿಕ ಮರಣ ಎನ್ನುತ್ತೇವೆ. ತಾತ್ಕಾಲಿಕ ಮರಣದಲ್ಲಿ ಶ್ವಾಸ ಶರೀರದೊಳಗೆ ಹೋಗಿ ನಿಂತು ಹೋಗುವುದರಿಂದ, ಆತನು ಪೂರ್ತಿಯಾಗಿ ಮರಣಿಸಿದಂತೆ ಹೊರಗೆ ಕಾಣಿಸಿದರೂ, ಅದು ಸಾಧಾರಣ ಮರಣ ಮಾತ್ರವಲ್ಲ. ಮರಣಿಸಿದಾಗ ಶರೀರದಿಂದ ಜೀವಾತ್ಮ ಹೋಗಿದ್ದಾನಾ ಇಲ್ಲವಾ ಎಂದು ಯಾರೂ ನೋಡುವುದಿಲ್ಲ. ಶರೀರದಲ್ಲಿ ಶ್ವಾಸ ಆಡುತ್ತಿದೆಯಾ ಇಲ್ಲವಾ ಎಂದು ಮಾತ್ರವೇ ಗಮನಿಸಿ, ಶ್ವಾಸ ಆಡದಿರುವುದರಿಂದ ಮರಣಿಸಿದ್ದಾನೆಂದು ಶ್ವಾಸವನ್ನನುಸರಿಸಿ ನಿರ್ಣಯಿಸುತ್ತಾರೆ. ಮರಣ ರಹಸ್ಯಗಳು ತಿಳಿಯದಿರುವುದರಿಂದ, ಶ್ವಾಸ ನಿಂತುಹೋಗಿರುವುದೆಲ್ಲವನ್ನು ಮರಣವೇ ಅಂದುಕೊಳ್ಳುವುದು ಮನುಷ್ಯರ ಕೆಲಸವಾಗಿರುವುದರಿಂದ, ಯೇಸು ಮರಣಿಸಿದಾಗ ಸಹ ಆತನು ಮರಣಿ

ಸಿದ್ದಾನೆಂದುಕೊಳ್ಳುವುದು ನಡೆದಿದೆ. ಆದರೆ ಆತನು ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆಂದು ತಿಳಿಯದೆ ಹೋಗಿದ್ದಾರೆ. ಯೇಸುಪ್ರಭು ನಂತರ ತಾತ್ಕಾಲಿಕ ಮರಣವನ್ನು ಹೊಂದಿದ ಮನುಷ್ಯರು ಎಷ್ಟೋ ಜನ ಇದ್ದಾರೆ. ಈ ವರ್ಷ ಅಲ್ಲಲ್ಲಿ ಮರಣಿಸಿದವರು ನಾಲ್ಕುಜನ ಪುನಃ ಬದುಕಿದಹಾಗೆ ವಾರ್ತೆಗಳ ಮೂಲಕ ತಿಳಿದಿದೆ. ತಮಿಳನಾಡಿನಲ್ಲಿ (11–07–2012 ಈನಾಡು ಬುಧವಾರ ನ್ಯೂಸ್ ಪೇಪರ್) ಚಿತೆಮೇಲೆ ಇಟ್ಟಿದ್ದ ವ್ಯಕ್ತಿ ಪುನಃ ಬದುಕಿ ಎದ್ದಂತೆ ಎಲ್ಲರಿಗೂ ತಿಳಿದಿದೆ. ಪುನರುತ್ಥಾನ ಯೇಸು ಹೊಂದಿದ್ದಾನೆ. ಹಾಗೆಯೇ ಸಾಧಾರಣ ಮನುಷ್ಯರು ಸಹ ಪುನರುತ್ಥಾನವನ್ನು ಹೊಂದಿದ್ದಾರೆ. ಪುನರುತ್ಥಾನ ಪ್ರತ್ಯೇಕವಾದ ಮಹಿಮೆಯಾಗಿ ಹೇಳಿಕೊಳ್ಳುತ್ತಾ, ಹಾಗೆ ಮರಣದಿಂದ ಅದೇ ಶರೀರದಿಂದ ಮತ್ತೆ ಎದ್ದಿರುವುದಕ್ಕೆ ಯೇಸುನನ್ನು ದೇವರನ್ನಾಗಿ ಹೇಳಿದರೆ, ಹಾಗೆ ಎದ್ದಿರುವವರನ್ನು ಸಹ ಯೇಸುಗೆ ಸಮಾನವಾಗಿ ಹೇಳಬೇಕು. ಅವರದು ಸಹ ಮಹತ್ವವಾಗಿಯೊ, ಅವರನ್ನು ಸಹ ದೇವತೆಗಳಾಗಿಯೊ ಹೇಳಬೇಕು.

ಒಂದುಬಾರಿ ತಪ್ಪು ಹೆಜ್ಜೆಹಾಕಿದರೆ ಅದರಿಂದ ಎಷ್ಟೋ ಅನರ್ಥ ಗಳಿರುತ್ತವೆ. ಈ ಕಾಲದಲ್ಲಾಗಲಿ, ಆ ಕಾಲದಲ್ಲಾಗಲಿ ತಾತ್ಕಾಲಿಕ ಮರಣವನ್ನು ಹೊಂದಿ ಎದ್ದಿರುವ ಮನುಷ್ಯರು ಎಷ್ಟೋ ಜನ ಇದ್ದಾರೆ. ಅಷ್ಟುಮಾತ್ರಕ್ಕೆ ಯೇಸುವನ್ನು ಅವರೊಂದಿಗೆ ಬೆರೆಸುತ್ತೇವೆಯೆ? ಯೇಸುದು ಸಾಧಾರಣ ಮನುಷ್ಯರದು ಒಂದೇ ವಿಧವಾದ ಮರಣವಾದಾಗ, ಒಂದೇ ವಿಧವಾಗಿ ಎದ್ದಾಗ, ಎಲ್ಲರನ್ನು ಒಂದೇ ವಿಧವಾಗಿ ಹೇಳಬೇಕಾಗಿ ಬರುತ್ತದೆ. ಆದ್ದರಿಂದ ಯೇಸು ಪುನಃ ಎದ್ದಿರುವುದನ್ನು ದೊಡ್ಡದಾಗಿ ಹೇಳಿಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಆತನು ಪುನರುತ್ಥಾನ ಹೊಂದಿದರೇನೆ ದೇವರಾಗಿದ್ದಾನಾ? ಮರಣಿಸಿ ಪುನಃ ಎದ್ದಿರುವುದರಿಂದ ಆತನನ್ನು ದೇವರೆನ್ನುವುದು ಪೂರ್ತಿ ತಪ್ಪು. ಏಸು ಮೊದಲಿನಿಂದ ದೇವರೇ ಆಗಲಿ, ಪುನರುತ್ಥಾನ ಹೊಂದಿರುವುದರಿಂದ ದೇವರೆನ್ನುವುದು ಕುರುಡರಂತೆ ಮಾತನಾಡುವುದಾಗುತ್ತದೆಂದು ತಿಳಿಯಬೇಕು.

ದ್ವಿತೀಯ ದೈವ ಗ್ರಂಥವಾದ ಬೈಬಲ್ ಪ್ರಕಾರ ಯೇಸುವನ್ನು ದೇವರೆಂದು ಯಾರಾದರೂ ಹೇಳಬಹುದು. ವಿಶಾಲ ಜ್ಞಾನವಿದ್ದರೆ ಪ್ರಥಮ ದೈವ ಗ್ರಂಥವನ್ನು ಅನುಸರಿಸಿ ಕೃಷ್ಣನನ್ನು ಅಸಲಾದ ದೇವರಾಗಿ ಗುರುತಿಸಬಹುದು. ಭಗವದ್ಗೀತೆಯನ್ನು ಸಂಪೂರ್ಣವಾಗಿ ತಿಳಿದವನು ಬೈಬಲ್ ಜ್ಞಾನವನ್ನು ಸುಲಭವಾಗಿ ಅರ್ಥಮಾಡಿಕೊಳ್ಳುತ್ತಾನೆ. ಎರಡು ಗ್ರಂಥಗಳ ಸಾರಾಂಶ ತಿಳಿದವನು, ಯಾರೂ ಕೃಷ್ಣನಾಗಿ ಭೂಮಿಮೇಲೆ ಕಾಣಿಸಿದ್ದಾನೊ ಆತನೇ ಮಾರುವೇಷದಿಂದ ಯೇಸುವಾಗಿ ಬಂದಿದ್ದಾನೆಂದು ತಿಳಿಯಬಲ್ಲನು. ಆಗ ದೈವ ಗ್ರಂಥಗಳ ಪ್ರಕಾರ ಕೃಷ್ಣನನ್ನು ದೇವರೇ ಅನ್ನಬಹುದು. ಕೃಷ್ಣನೇ ಯೇಸುವಾಗಿ ಬಂದಿದ್ದನಾದ್ದರಿಂದ ಯೇಸುವನ್ನು ಸಹ ದೇವರೆಂದು ಹೇಳಬಹುದು. ದೇವರನ್ನು ಎಂದಾದರೂ ಎಲ್ಲಾದರೂ ದೈವ ಗ್ರಂಥಗಳಲ್ಲಿನ ಧರ್ಮಗಳ ಪ್ರಕಾರ ಕಂಡುಕೊಳ್ಳಬಹುದು ಎನ್ನುವ ಸೂತ್ರದ ಪ್ರಕಾರ, ದೈವ ಗ್ರಂಥಗಳನ್ನು ಅನುಸರಿಸಿ ದೇವರನ್ನು ತಿಳಿಯುವುದಕ್ಕು, ಗುರುತಿಸುವುದಕ್ಕು ಸಾಧ್ಯವಾಗುತ್ತದೆ ಹೊರತು, ಮತ್ತೆ ಯಾವ ಇತರ ಗ್ರಂಥಗಳಿಂದ ದೇವರನ್ನು ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲ. ನಾನು ಇಂದೂ (ಹಿಂದೂ) ಆದರೂ ನನಗೆ ಭಗವದ್ಗೀತೆ ಹೇಗೆ ತಿಳಿದಿದೆಯೊ, ಬೈಬಲ್‌ನಲ್ಲಿನ ಯೇಸು ಚರಿತ್ರೆ ಹಾಗೆ ತಿಳಿದಿದೆ. ನನ್ನ ದೃಷ್ಠಿಯಲ್ಲಿ ಈ ದಿನ ಕ್ರೈಸ್ತವರು ಹೇಳಿಕೊಳ್ಳುವುದು ಬೈಬಲ್ ಅಲ್ಲ. ಅದರಲ್ಲಿನ ಅರವತ್ತಾರು ಪಾಠಗಳಲ್ಲಿ ಕೇವಲ ನಾಲ್ಕು ಪಾಠಗಳು ಮಾತ್ರವೇ ಬೈಬಲಾಗಿ ಲೆಕ್ಕಿಸುತ್ತಿದ್ದೇವೆ. ದೇವರು ಹೇಳಿರುವುದೇ ಧರ್ಮಶಾಸ್ತ್ರ. ಮನುಷ್ಯರು ಹೇಳಿರುವುದು ಎಂದಿಗೂ ಧರ್ಮಶಾಸ್ತ್ರ ಅಲ್ಲ. ಅದರ ಪ್ರಕಾರ ಭಗವಂತನಾದ ಕೃಷ್ಣನು ಹೇಳಿರುವುದು ಭಗವದ್ಗೀತೆಯಾದ ಹಾಗೆ, ಯೇಸು ಹೇಳಿರುವುದು ಮಾತ್ರವೇ ಬೈಬಲ್. ಹಾಗೆಯೇ ಭಗವಂತನು ಹೇಳದಿದ್ದರೂ ಸೃಷ್ಟ್ಯಾದಿಯಲ್ಲಿ ಹೇಳಲಾದ ಜ್ಞಾನವನ್ನೇ ಜಿಬ್ರಯೇಲ್ ಹೇಳಿರುವುದರಿಂದ, ಅದು ಎಲ್ಲವೂ ಖುರ್‌ಆನ್ ಗ್ರಂಥವಾಗಿ ತಯಾರಾಗಿದೆ. ಒಂದೇ ದೇವರಿಗೆ ಸಂಬಂಧಿಸಿದ ವಿಷಯಗಳೆಲ್ಲವೂ ಈ ಮೂರು ಗ್ರಂಥಗಳಲ್ಲಿ ಹೊರತು ಪ್ರಪಂಚ ದಲ್ಲಿ ಯಾವ ಗ್ರಂಥದಲ್ಲಿಯೂ ಇಲ್ಲ. ವಾಸ್ತವ ಹೀಗೆ ಇರುವಾಗ ವೇದಗಳಿಂದ ದೇವರು ತಿಳಿಯಲ್ಪಡುತ್ತಾನೆಂದು ಹೇಳುವುದು ಎಷ್ಟು

ಅಸತ್ಯವೋ ಆಲೋಚಿಸಿರಿ. ದೇವರ ಧರ್ಮಗಳು ದೇವರಿಗೇ ಗೊತ್ತು. ಮತ್ತೆ ಯಾವ ಮಾನವರಿಗೂ ತಿಳಿಯದು ಎಂದು ಖುರ್‌ಆನ್ ಗ್ರಂಥದಲ್ಲಿ ಮೂರನೇ ಸೂರಾ, ಏಳನೇ ಆಯತ್‌ನಲ್ಲಿ ಹೇಳಿದ ಹಾಗೆ, ದೇವರ ವಿಷಯಗಳು (ಧರ್ಮಗಳನ್ನು) ದೇವರೇ ಹೇಳಬೇಕೆ ಹೊರತು, ಮನುಷ್ಯರು ಹೇಳಲಾರರು. ಆದ್ದರಿಂದ ದೇವರ ಜ್ಞಾನವನ್ನು, ಧರ್ಮವನ್ನು, ದೇವರು ಕೊಟ್ಟಿರುವ ದೈವಗ್ರಂಥಗಳೇ ಹೇಳಬೇಕಾಗಲಿ, ಮನುಷ್ಯರು ಬರೆದ ವೇದಗಳು ಹೇಳಲಾರೆವು. ಮನುಷ್ಯರು ಇತರರನ್ನು ಯಾಮಾರಿಸಿ ಇದು ದೇವರ ವಿಷಯವೆಂದು ನಂಬಿಸಬಹುದು. ಆದರೂ ಅವರು ಎಷ್ಟೋ ತಿಳುವಳಿಕೆಯಿಂದ ನಂಬಿಸಿದರೂ, ಮನುಷ್ಯರು ಹೇಳಿರುವುದು ಎಂದಿಗೂ ದೇವರ ಧರ್ಮಗಳಾಗಿ ಇರುವುದಿಲ್ಲ. ಆದ್ದರಿಂದ ವೇದಗಳನ್ನು ನಂಬಬೇಕಾದ ಕೆಲಸವಿಲ್ಲ. **"ದೇಶ–ಮೋಸ, ದೇಹ–ಮೋಹ"** ಎಂದು ನಾವು ಹೇಳಿದ ನಾಣ್ನುಡಿ ಪ್ರಕಾರ ಮನುಷ್ಯ ಇತರರನ್ನು ಮೋಸ ಮಾಡಬೇಕೆಂದು ಪ್ರಯತ್ನ ಮಾಡುತ್ತಲೇ ಇರುತ್ತಾನೆ. ಮೋಸಹೋಗುವವರಿದ್ದರೆ ಎಷ್ಟಕ್ಕಾದರೂ ಮೋಸ ಮಾಡುತ್ತಾನೆ. ನಾವು ವೇದಗಳು ದೇವರ ವಿಷಯವನ್ನು ತಿಳಿಸಲಾರವೆಂದು ಹೇಳಿದರೆ, 'ಹೈಂದವ ಕ್ರೈಸ್ತವ' ಎನ್ನುವ ಗ್ರಂಥದಲ್ಲಿ ಆ ಗ್ರಂಥಕರ್ತ, 72ನೇ ಪುಟನಲ್ಲಿ ಹೇಗೆ ಹೇಳುತ್ತಿದ್ದಾನೊ ನೋಡಿರಿ.

**"ನಿಜಕ್ಕೆ ವೇದಗಳಲ್ಲಿ ತಿಳಿಸಲಾದ ದೇವರನ್ನು ಹೊರತು ನಾವು ಯಾರನ್ನು ಆರಾಧಿಸಬಾರದೆಂದು ವೇದಗಳೇ ಖಚಿತವಾಗಿ ಶಾಸಿಸುತ್ತಿವೆ." "ಮಿತ್ರರೆ! ಇಂದ್ರನನ್ನು ಹೊರತು ಅನ್ಯನನ್ನು ಕೀರ್ತಿಸಬೇಡಿ. ಎಂದು ಸಾಮವೇದ ಅಜ್ಞಾಪಿಸುತ್ತಿದೆ."**

**"ಇಂದ್ರನೆಂದರೆ! ಮರಣಿಸಿ ಪುನಃ ಎದ್ದು ತನ್ನ ಮಹಿಮೆಯನ್ನು ನಿರೂಪಿಸಿದವನೇ ಇಂದ್ರನು. ಆತನೇ ಭೂಮಧ್ಯಪ್ರದೇಶದಲ್ಲಿ ಅವತರಿಸಿದ ರಾರಾಜು ಯೇಸು. ಯೇಸುವನ್ನು ಆರಾಧಿಸುವುದು ವಾಸ್ತವಕ್ಕೆ ವಿದೇಶಿ**

ಮತವಲ್ಲ. ವೇದ ಋಷಿಗಳ ಮನಸ್ಸಿನಲ್ಲಿ ಪ್ರತ್ಯಕ್ಷವಾದ ದೇವರೇ ಯೇಸು ದೇವರು.”

ಕಡ್ಡಿಗೆ ಸಿಗಿಸಿದ ಐಸ್‌ಪೀಸ್ ಸಿಹಿಯಾಗಿ, ತಣ್ಣಗೆ ಇದೆ ಎಂದರೆ ಯಾರಾದರೂ ಒಪ್ಪಿಕೊಳ್ಳುತ್ತಾರೆ. ಅದು ವಾಸ್ತವವೇ ಆದ್ದರಿಂದ ಯಾರಾದರೂ ಒಪ್ಪಿಕೊಳ್ಳಬಹುದು. ಐಸ್‌ಪೀಸ್‌ನ್ನು ಒಪ್ಪಿಕೊಳ್ಳುತ್ತಿದ್ದಾರೆಂದು ಐಸ್‌ಪೀಸ್‌ನ್ನು ಕೆಸರಿನಲ್ಲಿ ಅದ್ದಿಕೊಟ್ಟರೆ ಅದು ಸಿಹಿಯಾಗಿರುವುದಿಲ್ಲ, ತಣ್ಣಗೆ ಇರುವುದಿಲ್ಲ. ಬಾಯೊಳಗೆ ಕೆಸರು ಹೊರತು ಐಸ್‌ಬರುವುದಿಲ್ಲ, ಅದರ ರುಚಿ ತಿಳಿಯುವುದಿಲ್ಲ. ಹಾಗೆಯೇ ದೈವ ಗ್ರಂಥಗಳಲ್ಲಿ ಹೇಳಿದ ದೈವವನ್ನು ಯಾರಾದರೂ ಒಪ್ಪಿ ಕೊಳ್ಳುತ್ತಾರೆ. ಏಕೆಂದರೆ ಅಲ್ಲಿ ಹೇಳಿರುವುದು ವಾಸ್ತವ. ಅಲ್ಲಿ ಯೇಸುವನ್ನು ದೇವರಾಗಿ ಒಪ್ಪಿಕೊಂಡಿದ್ದೇವೆಂದು, ವೇದಗಳಲ್ಲಿ ಮುಳುಗಿಸಿ ಇಲ್ಲವೆ ಬೆರೆಸಿ ಈತನೇ ದೇವರೆಂದು ಯೇಸುವನ್ನು ಹೇಳಿದರೂ, ಆತನು ವೇದಗಳಿಂದ ಹೇಳಲ್ಪಡುವುದರಿಂದ, ವೇದಗಳ ವಾಸನೆ ಇರುವುದರಿಂದ, ಯಾರೂ ಹಾಗೆ ಒಪ್ಪಿಕೊಳ್ಳುವುದಿಲ್ಲ. ವೇದಗಳು ಹೇಳಿದ ದೇವರು ಸ್ವಚ್ಛವಾದ ದೇವರು ಅಲ್ಲ. ಕಲುಷಿತವಾದ ದೇವರೆಂದು ಹೇಳಬಹುದು. ದೈವ ಗ್ರಂಥಗಳನ್ನು ತಿಳಿದವರು, ಮನುಷ್ಯ ಗ್ರಂಥಗಳಾದ ವೇದಗಳ ಮಾತುಗಳನ್ನು ಲೆಕ್ಕಿಸುವುದಿಲ್ಲ. ವೇದಗಳಲ್ಲಿ ದೇವತೆಗಳೆಲ್ಲರೂ ಇದ್ದಾರೆ. ಆದ್ದರಿಂದ ಆ ದೇವತೆಗಳ ಹಾಗೆ ಎಲ್ಲರಲ್ಲಿ ಈತನು ಒಬ್ಬ ದೇವರಾಗಿ ಹೋಗುತ್ತಾನಾಗಲಿ, ಎಲ್ಲರಿಗೂ ಅಧಿಪತಿಯಾದ ದೇವರಂತೆ ಲೆಕ್ಕಿಸಲ್ಪಡುವುದಿಲ್ಲ. ಮೇಲಿನ ವಾಕ್ಯದಲ್ಲಿ ಅದೇ ಪ್ರಮಾದ ಏರ್ಪಟ್ಟಿದೆ. ಸೃಷ್ಠಿಕರ್ತ, ಸೃಷ್ಠಿಗೆ ಅಧಿಪತಿಯಾದ ದೇವರನ್ನು ಪುರಾಣಗಳ ದೇವತೆಗಳಲ್ಲಿನ ಇಂದ್ರನನ್ನಾಗಿ ಲೆಕ್ಕಿಸುವುದು ನಡೆದಿದೆ. ಪೋಲೀಸ್ ಡಿಪಾರ್ಟಮೆಂಟ್‌ನಲ್ಲಿ ಎಲ್ಲರೂ ಖಾಕಿ ಕಲರ್ ಬಟ್ಟೆಗಳೇ ಧರಿಸುತ್ತಾರೆ. ಪೋಲೀಸ್ ಡಿಪಾರ್ಟ್‌ಮೆಂಟ್‌ಗೆಲ್ಲಾ ಒಂದೇ ಕಲರ್ ಡ್ರಸ್ ಇರುತ್ತದೆ. ಆದರೆ ಡ್ರಸ್ ಒಂದೇ ಆದರೂ ಅಡ್ರಸ್ ಮಾತ್ರ ಬೇರೆಬೇರೆಯಾಗಿ ಇರುತ್ತದೆ. ಪೋಲೀಸ್ (ಕಾನಿಸ್ಟೇಬುಲ್)ರವರಿಂದ ಸಬ್ ಇನ್‌ಸ್ಪೆಕ್ಟರ್ ವರೆಗೂ ಗ್ರಾಮಗಳಲ್ಲಿರುವ ಪೋಲೀಸ್‌ಸ್ಟೇಷನಲ್ಲಿ ಇರುತ್ತಾರೆ. ಕೆಲವು

ಗ್ರಾಮಗಳ ಪರಿಧಿಯೆಲ್ಲ ಸೇರಿಸಿ ಒಂದು ಸರ್ಕಲ್ ಆಗಿ ಏರ್ಪಡಿಸಿ ಅದಕ್ಕೆಲ್ಲ ಅಧಿಪತಿಯಾಗಿ, ಸರ್ಕಿಲ್ ಇನ್‌ಸ್ಪೆಕ್ಟರ್ ಇರುತ್ತಾನೆ. ಅಂತಹ ಕೆಲವು ಏರಿಯಾಗಳಿಗೆ ದೊಡ್ಡದಾಗಿ ಒಂದು ಪಟ್ಟಣದಲ್ಲಿ ಡಿ.ಯಸ್.ಪಿ ಇರುತ್ತಾನೆ. ನಂತರ ಅಧಿಕಾರಿ ಅಡ್ರಸ್ ಜಿಲ್ಲೆಯಲ್ಲಿಯೇ ಇರುತ್ತದೆ. ಜಿಲ್ಲಾ ಪೋಲೀಸ್ ಅಧಿಕಾರಿಯಾದ ಯಸ್.ಪಿ ಯವರು ಜಿಲ್ಲಾ ಕೇಂದ್ರವಾದ ಪಟ್ಟಣದಲ್ಲಿ ಇರುತ್ತಾರೆ. ನಂತರ ಎಲ್ಲರಿಗೂ ಅಧಿಕಾರಿಯಾದ ಡಿ.ಜಿ.ಪಿ ಯವರು ರಾಷ್ಟ್ರ ರಾಜಧಾನಿಯಲ್ಲಿ ಇರುತ್ತಾನೆ. ಈ ವಿಧವಾಗಿ ಪೋಲೀಸ್ ಡಿಪಾರ್ಟ್‌ಮೆಂಟ್‌ನಲ್ಲಿ ಎಲ್ಲರ ಡ್ರಸ್ ಒಂದೇ ಆದರೂ, ಅವರ ಹುದ್ದೆಗಳನ್ನನುಸರಿಸಿ ಅಡ್ರಸ್‌ಗಳು ಬೇರೆಬೇರೆಯಾಗಿ ಇರುತ್ತವೆ. ಪೋಲೀಸ್ ಅವರಲ್ಲಿ ಹುದ್ದೆಗಳನ್ನು ತಿಳಿಸುವ ಗುರುತುಗಳು ಅವರ ಭುಜಗಳ ಮೇಲೆ ಇರುತ್ತವೆ. ಡಿಪಾರ್ಟ್‌ಮೆಂಟ್ ವಿಷಯವು ಪೂರ್ತಿಯಾಗಿ ತಿಳಿದವನು ಅವರ ಭುಜಗಳ ಮೇಲೆ ಗುರುತುಗಳನ್ನನುಸರಿಸಿ, ಈತನು ಇಷ್ಟು ಸ್ಥಾನವಿರುವ ಅಧಿಕಾರಿ ಎಂದು ಗುರುತಿಸಬಲ್ಲನು. ಪೋಲೀಸ್ ಡಿಪಾರ್ಟ್‌ಮೆಂಟ್ ವಿಷಯ ಏನೊ ತಿಳಿಯದ ಹಳ್ಳಿಯ ವ್ಯಕ್ತಿ ಡಿ.ಯಸ್.ಪಿ ಯನ್ನು ನೋಡಿದರೂ ಡಿ.ಜಿ.ಪಿ ಯನ್ನು ನೋಡಿದರೂ ಒಂದಾಗಿಯೇ ಲೆಕ್ಕಿಸುತ್ತಾನಾಗಲಿ ಅವರ ಹುದ್ದೆಯಲ್ಲಿನ ವ್ಯತ್ಯಾಸವನ್ನು ಗ್ರಹಿಸಲಾರನು.

ಹಾಗೆಯೇ ಧರ್ಮಶಾಸ್ತ್ರವೊಂದರ ವಿಷಯ ಎಷ್ಟು ಮಾತ್ರ ತಿಳಿಯದ ವ್ಯಕ್ತಿಗೆ ದೇವತೆಗಳಲ್ಲಿನ ಸ್ಥಾನ ತಿಳಿಯದೆ, ಎಲ್ಲರಿಗೂ ಅಧಿಪತಿಯಾದ ದೇವರನ್ನು ಸ್ವಲ್ಪ ಅಧಿಕಾರ ಇರುವವನಂತೆ ಹೋಲಿಸಿಕೊಳ್ಳುತ್ತಾನೆ. ಯಾವ ವಿಧವಾಗಿ ಡಿ.ಯಸ್.ಪಿ ಗು, ಡಿ.ಜಿ.ಪಿ ಗು ವ್ಯತ್ಯಾಸ ತಿಳಿಯದವನು ಇಬ್ಬರನ್ನು ಒಂದೇ ವಿಧವಾಗಿ ಹೋಲಿಸಿಕೊಳ್ಳುತ್ತಾನೊ, ಹಾಗೆಯೇ ಇಂದ್ರನನ್ನು, ಇಂದ್ರನಿಗೂ ಸಹ ಅಧಿಪತಿಯಾದ ದೇವರನ್ನು ಸಮಾನವಾಗಿ ಲೆಕ್ಕಿಸಿಕೊಳ್ಳುತ್ತಾನೆ. ಆದ್ದರಿಂದ ಮೇಲಿನ ವಾಕ್ಯದಲ್ಲಿ ಲೋಕಕ್ಕೆ ಅಧಿಪತಿಯಾದ ದೇವರನ್ನು, ಒಂದು ಲೋಕಕ್ಕೂ ಸಹ ಅಧಿಪತಿಯಲ್ಲದ ಇಂದ್ರನನ್ನಾಗಿ ಹೇಳಿಕೊಳ್ಳುವುದು ನಡೆದಿದೆ. ಒಬ್ಬ ಹಳ್ಳಿಯವನು ಪೋಲೀಸ್ ಡಿಪಾರ್ಟ್‌ಮೆಂಟ್ ವಿಷಯ, ವಿವರ ತಿಳಿಯದೆ

ಡಿ.ಯಸ್.ಪಿ ಯನ್ನು ಡಿ.ಜಿ.ಪಿ ಯನ್ನು ಅವರು ಧರಿಸಿದ ಡ್ರೆಸ್ಸ್‌ನ್ನನುಸರಿಸಿ ಒಂದೇ ವಿಧವಾಗಿ ತಿಳಿದುಕೊಂಡ ಹಾಗೆ, ವೇದಗಳಲ್ಲಿ ಮುಳುಗಿದವನು ಧರ್ಮಶಾಸ್ತ್ರವೊಂದರ ವಿಷಯ, ವಿವರ ತಿಳಿಯದೆ ಇಂದ್ರನನ್ನು, ಇಂದ್ರಾಧಿಪತಿಯನ್ನು ಇಬ್ಬರನ್ನು ಒಂದೇ ವಿಧವಾದ ದೇವತೆಗಳಾಗಿ ಹೋಲಿಸಿಕೊಂಡಿದ್ದಾನೆ. ಅದೇ ವಿಧವಾಗಿ ಇಲ್ಲಿಯೂ ಸಹ ದೇವತೆಗಳ, ದೇವರ ವ್ಯತ್ಯಾಸ ತಿಳಿಯದೆ ಎಲ್ಲರಿಗೂ ಅಧಿಪತಿಯಾದ ದೇವರನ್ನು ಕೆಲವರಿಗೇ ಅಧಿಪತಿಯಾದ ಇಂದ್ರನನ್ನಾಗಿ ಹೋಲಿಸಿ ಹೇಳುವುದು ನಡೆದಿದೆ.

ಕ್ರೈಸ್ತವ ಮತದ ಮೇಲೆ ತಮಗಿರುವ ಪ್ರೇಮ, ಅಭಿಲಾಷೆಯನ್ನನುಸರಿಸಿ ವೇದಗಳನ್ನು ಅಡ್ಡ ಇಟ್ಟುಕೊಂಡು, ದೇವರ ಸ್ಥಾಯಿಯನ್ನು ಗುರುತಿಸದೆ, ಕಲೆಕ್ಟರ್‌ಗಿಂತ ಬಿಲ್‌ಕಲೆಕ್ಟರ್ ದೊಡ್ಡವನಲ್ಲವೆ! ಎನ್ನುವಂತಿದೆ. ಯಾರಾದರೂ ತಿಳಿದವನು ಬಿಲ್ ಕಲೆಕ್ಟರ್‌ಗಿಂತ ಕಲೆಕ್ಟರ್ ದೊಡ್ಡವನೆಂದು ಹೇಳಿದರೆ, ಅದು ಹೇಗೆ ಆಗುತ್ತದೆ. ಆತನು ಬರೀ ಕಲೆಕ್ಟರ್ ಅಲ್ಲವೆ! ಈತನ ಮುಂದೆ ಬಿಲ್ ಹೆಚ್ಚು ಇದೆ ಅಲ್ಲವೆ! ಎಂದು ವಾದಿಸಿದ್ದಾನಂತೆ. ಪ್ರತ್ಯಕ್ಷವಾಗಿ ಬಿಲ್ ಕಾಣಿಸುವ ಆರು ಅಕ್ಷರಗಳ ಬಿಲ್ ಕಲೆಕ್ಟರ್ ದೊಡ್ಡದಲ್ಲ, ನಾಲ್ಕು ಅಕ್ಷರಗಳ ಕಲೆಕ್ಟರ್ ದೊಡ್ಡದು ಅಂದರೆ ನಾನೇನು ಲೆಕ್ಕ ತಿಳಿಯದವನಾ, ಆರು ದೊಡ್ಡದಾ, ನಾಲ್ಕು ದೊಡ್ಡದಾ ಎಂದು ಎದುರು ಪ್ರಶ್ನೆ ಹಾಕಿದನಂತೆ. ಈ ವಿಧವಾಗಿ ವೇದಗಳೆಂಬ ಲೆಕ್ಕಗಳು ತಿಳಿದವನು ಧರ್ಮವೆಂಬ ಹುದ್ದೆಯನ್ನು ಗುರುತಿಸದೆ, ದೇವರಗಿಂತ ಇಂದ್ರನನ್ನು ದೊಡ್ಡವನೆಂದುಕೊಳ್ಳುವುದರಲ್ಲಿ ಆಶ್ಚರ್ಯವಿಲ್ಲ. ಒಂದು ಕಡೆ ಯೇಸುವನ್ನು ರಾರಾಜ ಅನ್ನುತ್ತಾ, ಮತ್ತೊಂದು ಕಡೆ ಯೇಸುನನ್ನು ರಾಜನಕೆಳಗೆ ಬಂಟನಂತೆ ಹೇಳುವುದು ನಡೆಯುತ್ತಿದ್ದರೂ, ಅವರಿಗೆ ಮಾತ್ರ ಮತ ಮುಖ್ಯವಾಗಿ ಕಾಣಿಸುತ್ತಿದೆಯಾಗಲಿ, ದೇವರು ಮುಖ್ಯವಾಗಿ ಕಾಣಿಸಲಿಲ್ಲ. ಯೇಸನ್ನು ಆರಾಧಿಸುವುದು ವಿದೇಶಿ ಮತವಲ್ಲ ಎಂದು ಹೇಳುವುದನ್ನನುಸರಿಸಿ ನೋಡಿದರೆ, ದೇವರಿಗು ಸಹ ಮತವನ್ನು ಸುತ್ತಿ, ಆತನದೊಂದು ಮತವೆನ್ನುವಂತೆ ಹೇಳುತ್ತಿದ್ದಾರಾಗಲಿ, ದೇವರು ಮತಾತೀತನು ಎಂದು ಹೇಳುತ್ತಿಲ್ಲ. ಯೇಸು

ವಿಷಯ ಬೈಬಲ್‌ನಲ್ಲಿ ಇದೆ, ವೇದಗಳಲ್ಲಿ ದೇವತೆಗಳ ವಿಷಯವಿದೆ. ಬೈಬಲ್‌ನಲ್ಲಿ ಯೇಸುವನ್ನು ಕುರಿತು ಹೀಗೆ ಇದೆ ಎಂದು ಹೇಳಿದರೆ ಹಿಂದುಗಳು ತಮ್ಮ ಮಾತನ್ನು ಕೇಳುವುದಿಲ್ಲವೆಂದು, ಇದು ಪರಮತ ಗ್ರಂಥವೆಂದು ದೂರವಾಗಿ ಹೋಗುತ್ತಾರೆಂದು ತಿಳಿದವನು, ಹಿಂದುಗಳಿಗೆ ಸರಿಹೋಗದ ಬೈಬಲ್ ಹೆಸರು ಹೇಳದೆ, ಹಿಂದೂಗಳು ದೊಡ್ಡದಾಗಿ ಭಾವಿಸಿಕೊಂಡ ವೇದಗಳ ಹೆಸರುಗಳು ಹೇಳಿದರೆ ಚೆನ್ನಾಗಿರುತ್ತದೆಂದು ಅವರನ್ನು ಆಕರ್ಷಿಸುವ ಉದ್ದೇಶದಿಂದ, ಯೇಸುವಿಗೆ ಸಂಬಂಧವಿಲ್ಲದ ವೇದಗಳನ್ನು ಹೇಳುತ್ತಾ, ವೇದಗಳಲ್ಲಿ ಯೇಸುಪ್ರಭು ವಿಷಯವೇ ಇದೆಯೆಂದು ನಂಬಿಸುತ್ತಿದ್ದಾನೆ.

"ಹೈಂದವ ಕ್ರೈಸ್ತ" ಎನ್ನುವ ಗ್ರಂಥದಲ್ಲಿ 76ನೇ ಪುಟದಲ್ಲಿ ಪಾಪ ಸಂಕ್ರಮಿಸುವುದರ ಮೇಲೆ ಎರಡು ವಾಕ್ಯಗಳು ಇವೆ. ಅವು ದೈವ ಗ್ರಂಥದಲ್ಲಿನ ದೈವ ಮಾತುಗಳಿಗೆ ವಿರುದ್ಧವಾಗಿ ಇರುವುದರಿಂದ ಅವುಗಳನ್ನು ವಿಮರ್ಶಿಸಿ, ಅವು ತಪ್ಪು ಎಂದು ಹೇಳಬೇಕಾಗಿ ಬಂದಿದೆ. ಪಾಪ ಸಂಭವಿಸುವುದನ್ನು ಕುರಿತು ಆ ಎರಡು ವಾಕ್ಯಗಳಲ್ಲಿ ಏನು ಬರೆದಿದ್ದಾರೋ ಈಗ ನೋಡೋಣ.

**"ವಶಿಷ್ಠನ ಪೂರ್ವಿಕರು ದ್ರೋಹ ಮಾಡಿದ್ದಾರೆಂದು ವಶಿಷ್ಠ ಮಹರ್ಷಿ ಏನೋ ಆತುರತೆಯಿಂದ ಅಸತ್ಯ ಹೇಳಲಿಲ್ಲ. ಪರಮಾತ್ಮನ ಪ್ರೇರಣೆಯಿಂದ ವಶಿಷ್ಠನು ಅಂದಿದ್ದಾನೆ. ಪಾಪ ಎನ್ನುವುದು ವಶಿಷ್ಠನಿಗೆ ಪಿತೃಗಳಿಂದ ಸಂಕ್ರಮಿಸಿರುವುದು."**

ಪ್ರಥಮ ದೈವ ಗ್ರಂಥ ಭಗವದ್ಗೀತೆ ಪ್ರಕಾರ, ಮತ್ತು ದ್ವಿತೀಯ ದೈವ ಗ್ರಂಥ ಬೈಬಲ್ ಪ್ರಕಾರ, ಒಟ್ಟು ಧರ್ಮ ಶಾಸ್ತ್ರದ ಪ್ರಕಾರ ಪಾಪಗಳಾಗಲಿ, ಪುಣ್ಯಗಳಾಗಲಿ ಒಬ್ಬ ವ್ಯಕ್ತಿಗೆ ಅವರ ಹಿರಿಯರಾದ ತಾಯಿತಂದೆಯರಿಂದಾಗಲಿ, ಚಿಕ್ಕವರಾದ ಮಗ, ಮಗಳಿಂದಾಗಲಿ ಸಂಕ್ರಮಿಸುವುದಿಲ್ಲ. ಯಾರು ಮಾಡಿಕೊಂಡ ಪಾಪ ಅವರನ್ನು ಸೇರುತ್ತದೆ. ಶರೀರದಲ್ಲಿ ಅಹಮ್‌ನಿಂದ ಪ್ರತಿ ಮನುಷ್ಯನಿಗು ಪಾಪಪುಣ್ಯಗಳೆಂಬ ಕರ್ಮಗಳು ಏರ್ಪಡುತ್ತಿವೆ. ಒಬ್ಬ ಮನುಷ್ಯನಿಗೆ ಪಾಪ

ಬರುವುದಕ್ಕಾಗಲಿ, ಪುಣ್ಯ ಬರುವುದಕ್ಕಾಗಲಿ ತಕ್ಕಂತೆ ಅವನ ಶರೀರದಲ್ಲಿಯೇ ಯಂತ್ರಾಂಗ ಅಳವಡಿಸಲಾಗಿದೆ. ಹಾಗೆಯೇ ಯಾರ ಕರ್ಮ ಅವರು ಅನುಭವಿಸುವುದಕ್ಕು ಸಹ ಶರೀರದಲ್ಲಿನ ಅಂತರಂಗ ಯಂತ್ರಾಂಗ ತಯಾರಾಗಿದೆ. ಆದ್ದರಿಂದ ಯಾರ ಪಾಪ ಅವನನ್ನು ಅಂಟಿಕೊಳ್ಳುತ್ತದೆ ಹೊರತು, ಇತರರು ಮಾಡಿದ ಪಾಪ ಯಾರನ್ನು ಅಂಟಿಕೊಳ್ಳುವುದಿಲ್ಲ. ಹಾಗೆಯೇ ಯಾರ ಪಾಪವನ್ನು ಅವರು ಅನುಭವಿಸಬೇಕಾಗಿದ್ದೇ ಹೊರತು, ಒಬ್ಬರ ಪಾಪವನ್ನು ಮತ್ತೊಬ್ಬನು ಅನುಭವಿಸುವುದಕ್ಕೆ ಸಾಧ್ಯವಿಲ್ಲ. ಶರೀರ ನಿರ್ಮಾಣದಲ್ಲಿಯೆ ದೇವರು ಅಂತಹ ಜೋಡಣೆ ಇಟ್ಟಿದ್ದಾನೆ. ಹಾಗೆಯೇ ದೈವಜ್ಞಾನ ಇರುವವನು ಕಾರ್ಯವನ್ನು ಮಾಡಿದರೂ, ಕರ್ಮವನ್ನು ಅಂಟದಂತೆ ಮಾಡಿಕೊಳ್ಳುವುದಕ್ಕೆ ತಕ್ಕ ವಿಧಾನವನ್ನು ಸಹ ರೂಪಿಸಿದ್ದಾನೆ. ಹಾಗೆಯೇ ಜ್ಞಾನ ಇಲ್ಲದವನು ಕಾರ್ಯವನ್ನು ಮಾಡದಿದ್ದರೂ, ಅಂದುಕೊಂಡಷ್ಟು ಮಾತ್ರಕ್ಕೆ ಆ ಕಾರ್ಯವನ್ನು ಮಾಡಿದಂತಾಗಿ, ಪಾಪ ಬಂದು ಸೇರುವಹಾಗೆ ಶರೀರದಲ್ಲಿ ಜೋಡಣೆ ಇದೆ. ಆದ್ದರಿಂದ ಭಗವದ್ಗೀತೆಯಲ್ಲಿ ಮೋಕ್ಷ ಸನ್ಯಾಸ ಯೋಗದಲ್ಲಿ 17ನೇ ಶ್ಲೋಕದಲ್ಲಿ **"ಯಾರ ಭಾವದಲ್ಲಿ ಅಹಂಕಾರ ಇಲ್ಲವೊ ಅವನು ಲೋಕದಲ್ಲಿರುವವರೆಲ್ಲರನ್ನು ಹತ್ಯೆ ಮಾಡಿದರೂ, ಅವನು ಹಂತಕನು ಅಲ್ಲ. ಹತ್ಯಾಪಾಪ ಅವನನ್ನು ಅಂಟುವುದಿಲ್ಲ"** ಎಂದು ಹೇಳಿದ್ದಾನೆ. ಹಾಗೆಯೇ ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 5ನೇ ಅಧ್ಯಾಯ 28ನೇ ವಾಕ್ಯದಲ್ಲಿ **"ಒಬ್ಬ ಸ್ತ್ರೀಯನ್ನು ಮೋಹದ ದೃಷ್ಠಿಯಿಂದ ನೋಡುವ ಪ್ರತಿಯೊಬ್ಬನು ಆಗಲೇ ತನ್ನ ಹೃದಯದಲ್ಲಿ ಆಕೆಯೊಂದಿಗೆ ವ್ಯಭಿಚಾರ ಮಾಡಿದವನಾಗುತ್ತಾನೆ"** ಎಂದು ಇದೆ. ಆದ್ದರಿಂದ ಮನುಷ್ಯನ ಭಾವವನ್ನನುಸರಿಸಿ ಕೆಲಸ ಮಾಡಿದರೂ, ಮಾಡದಿದ್ದರೂ ಪಾಪ ಬರುವುದು, ಬಾರದೆ ಹೋಗುವುದು ನಡೆಯುತ್ತದೆ. ಪಾಪ ಬರುವುದಾಗಲಿ, ಬಾರದಂತೆ ಹೋಗುವುದಾಗಲಿ ಅವರವರ ಭಾವವನ್ನನುಸರಿಸಿ ಇರುತ್ತದೆ. ಅಷ್ಟೇ ಹೊರತು ಇತರರು ಮಾಡಿರುವುದು ತನಗೂ, ತಾನು ಮಾಡಿರುವುದು ಇತರರಿಗೂ ಹೋಗುವುದಿಲ್ಲ, ಬರುವುದಿಲ್ಲ ವೆಂದು ತಿಳಿಯಬೇಕು.

**ಈಗ ಅದೇ ಪುಟದಲ್ಲಿನ ಮತ್ತೊಂದು ವಾಕ್ಯವನ್ನು ನೋಡೋಣ. "ಮಾನವ ಜಾತಿಗೆ ಮೂಲ ಪುರುಷನಾದ ಆದಾಮು ಮೂಲಕ ನಮ್ಮ ತಾಯಿತಂದೆಯರ ಮೂಲಕ ನಮಗೆ ಪಾಪ ಸಂಕ್ರಮಿಸಿದೆಯೆಂದು ಬೈಬಲ್ ತಿಳಿಸುತ್ತಿದೆ" (ಯೋಬ 14–4, ರೋಮಾ 5–19).**

ಬೈಬಲ್ ಗ್ರಂಥದಲ್ಲಿ ಯೋಬ ಮತ್ತು ರೋಮಾ ಅನ್ನುವ ಎರಡು ಸುವಾರ್ತೆಗಳಲ್ಲಿ ಆದಾಮನ ಮೂಲಕ, ನಮ್ಮ ತಾಯಿತಂದೆಯರ ಮೂಲಕ ನಮಗೆ ಪಾಪ ಬಂದಿದೆಯೆಂದು ಹೇಳಿದ್ದಾರೆ. ಬೈಬಲ್ ಕುರಿತು ಇದಕ್ಕು ಮೊದಲೇ ಒಂದು ವಿಷಯವನ್ನು ಹೇಳಿದ್ದೇವೆ. ಬೈಬಲ್‌ನಲ್ಲಿರುವ ಅರವತ್ತಾರು ಪಾಠಗಳು ಬೈಬಲಾಗಿ ಇದ್ದರೂ ಅದರಲ್ಲಿ ಮಾನವನಿಗೆ ಕೆಲಸಕ್ಕೆ ಬರುವ ಬೈಬಲ್ ಯೇಸು ಹೇಳಿದ ನಾಲ್ಕು ಸುವಾರ್ತೆಗಳು ಮಾತ್ರವೇ ಎಂದು ಹೇಳಿದ್ದೇವೆ. ಮನುಷ್ಯನನ್ನು ದೈವಮಾರ್ಗದಲ್ಲಿ ನಡೆಸುವವು ಯೇಸು ಹೇಳಿದ ಜ್ಞಾನವಿರುವ ನಾಲ್ಕು ಸುವಾರ್ತೆಗಳು ಮಾತ್ರವೇ ಎಂದು ತಿಳಿಯಬೇಕು. ಉಳಿದ ಅರವತ್ತೆರಡು ಸುವಾರ್ತೆಗಳಲ್ಲಿ ಸತ್ಯವೇ ಇದೆಯೆಂದು ನಂಬಬೇಕಾದ ಕೆಲಸವಿಲ್ಲ. ಮತ್ತಾಯ, ಮಾರ್ಕ, ಲೂಕಾ, ಯೋಹಾನ್ ಎನ್ನುವ ನಾಲ್ಕು ಸುವಾರ್ತೆಗಳು ಹೊರತು ಉಳಿದವೆಲ್ಲ ಮನುಷ್ಯರು ಹೇಳಿರುವವೇ ಆಗಿರುವುದರಿಂದ ಅವುಗಳನ್ನು ಜ್ಞಾನ ಪರಿಧಿಯೊಳಗೆ ತೆಗೆದುಕೊಳ್ಳಬಾರದು. ಬೈಬಲ್‌ಗೆಲ್ಲ ಮೂಲ ಪುರುಷನು ಏಸನೇ ಆದಾಗ ಆತನು ಹೇಳಿರುವವೇ ಜ್ಞಾನ, ಧರ್ಮವಾಗುತ್ತದೆ. ಮನುಷ್ಯರು ಬರೆದಿರುವವು ಜ್ಞಾನ, ಧರ್ಮ ಆಗುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಮೇಲಿನ ಸುವಾರ್ತೆಗಳಲ್ಲಿನ ತಾಯಿತಂದೆಯರಿಂದ ಪಾಪ ಬರುತ್ತದೆಯೆಂದು ಹೇಳಿದ ಮಾತನ್ನು ಖಂಡಿಸಬಹುದು. ಆ ಮಾತು ಸತ್ಯವಲ್ಲ. ಯೇಸುಪ್ರಭುವು ಹೇಳಿದ ನಾಲ್ಕು ಸುವಾರ್ತೆಗಳಲ್ಲಿ ತಾಯಿತಂದೆಯರಿಂದ ಪಾಪ ಬರುತ್ತದೆಂದು ಎಲ್ಲಿಯೂ ಇಲ್ಲ. ಮೇಲಾಗಿ ಯಾರು ಮಾಡಿಕೊಂಡಿರುವುದು ಅವನಿಗೆ ಬರುತ್ತದೆಂದು, ಮಾಡದಿದ್ದರೂ ಭಾವದಿಂದಲೆ ಪಾಪ ಬರುತ್ತದೆಂದು ಸಹ ಹೇಳಿದ್ದಾನೆ. ಮೇಲಿನ

ವಾಕ್ಯದಲ್ಲಿ ಮಾನವ ಜಾತಿಗೆ ಮೂಲ ಪುರುಷನು ಆದಾಮ ಎಂದೂ, ಆದಾಮ ಹವ್ವ ಇಂದಲೇ ಸಮಸ್ತ ಮಾನವಜಾತಿ ಹುಟ್ಟಿದೆಯೆಂದು ಹಳೆ ನಿಬಂಧನ ಆದಿಕಾಂಡದಲ್ಲಿ ಹೇಳುವುದು ನಡೆದಿದೆ. ಆದರೆ ಯೇಸುಪ್ರಭುವು ಹಾಗೆ ಎಲ್ಲಿಯೂ ಹೇಳಲಿಲ್ಲ. ಮಾನವರೆಲ್ಲರನ್ನು ಸೃಷ್ಟಿಕರ್ತನಾದ ದೇವರೇ ಸೃಷ್ಟಿಸಿದ್ದಾನೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಎಲ್ಲರನ್ನು ಸೃಷ್ಟಿಸಿದ ದೇವರೇ ಸಮಸ್ತ ಮಾನವರಿಗು ತಂದೆಯೆಂದು, ಆತನು ಪರಲೋಕದಲ್ಲಿದ್ದಾನೆಂದು ಹೇಳುವುದು ನಡೆದಿದೆ. ಆದ್ದರಿಂದ ಮೇಲಿನ ವಾಕ್ಯವನ್ನು ನಂಬಬೇಕಾದ ಕೆಲಸವಿಲ್ಲ.

ಈಗ 77ನೇ ಪೇಜಿನಲ್ಲಿ ಪಾಪಪರಿಹಾರಕ್ಕೋಸ್ಕರ ರಕ್ತಪ್ರೋಕ್ಷಣ ನಡೆಯಬೇಕೆಂದು ಹೇಳಿದ ಸಮಾಚಾರವನ್ನು ಪರಿಶೀಲಿಸೋಣ. **"ಈ ಮಾತುಗಳು ನಾನು ಕಲ್ಪಿಸಿ ಬರೆದಿರುವವು ಅಲ್ಲ. ಇನ್ನು ಯಾವ ಇತರ ಮಾನವನು ಕಲ್ಪಿಸಿರುವವು ಅಲ್ಲ. ಸಾಕ್ಷಾತ್ ಬ್ರಹ್ಮಮುಖದಿಂದ, ಅಂದರೆ ಸೃಷ್ಟಿಕರ್ತನ ಬಾಯಿ ಇಂದ ಬಂದಿರುವ ಮಾತುಗಳು. ಆ ಮಾತುಗಳನ್ನು ಹಿಡಿಸಿಕೊಳ್ಳದೆ ಬಿಡುವುದು ಭಕ್ತಿಯಲ್ಲ, ಭಕ್ತಿಹೀನತೆ ಆಗುತ್ತದೆ, ದೈವದ್ರೋಹ ಆಗುತ್ತದೆ.**

**ಇಲ್ಲಿ ಪ್ರಸ್ತಾಪಿಸಲ್ಪಟ್ಟ ಸಮಸ್ಯೆ ಏನು? ಇಂದ್ರನಿಗೆ ಒಂದು ಸಮಸ್ಯೆ ಬಂದಿದೆ, ಏನದು ಸಮಸ್ಯೆ? ಆತನು ಪಾಪ ಪಾಶದಿಂದ ಬಂಧಿಸಲ್ಪಟ್ಟಿದ್ದಾನಂತೆ. ನಾನು ಪಾಪಪಾಶ ಬಂಧಗಳಿಂದ ಬಂಧಿಸಲ್ಪಟ್ಟವನು. ನಾನು ಪಾಪಪಾಶ ಬಂಧದಿಂದ ವಿಮುಕ್ತನಾಗಬೇಕು. ಅದೇ ಇಂದ್ರನ ಕೋರಿಕೆ.**

**ಆಗ ಇಂದ್ರನು ಏನು ಮಾಡಿದ್ದಾನೆ? ಯಾವ ಮಾರ್ಗವನ್ನು ಅವಲಂಬಿಸಿದ್ದಾನೆ? ಇಂದ್ರನು ಒಂದು ವೃಷಭವನ್ನು ಬಲಿಯಾಗಿ ಕೊಟ್ಟಿದ್ದಾನೆ. ಹಾಗೆ ಎತ್ತನ್ನು ಬಲಿ ಕೊಡುವುದರಿಂದ ತಾನು ಪಾಪಪಾಶ**

**<u>ಬಂಧಗಳಿಂದ ವಿಮುಕ್ತನು ಆಗುತ್ತೇನೆಂದು ಇಂದ್ರನು ಭಾವಿಸಿದ್ದಾನೆ. ಅಂದರೆ ಈ ಮಾತಿಗೆ ಅರ್ಥ ಏನು? ಪಾಪಪರಿಹಾರಕ್ಕೋಸ್ಕರ 'ಬಲಿ' ತಪ್ಪದೆ ನಡೆಯಬೇಕು ಎಂಬ ಮಾತು ನಂತರ ಬಂದಿರುವ ಗ್ರಂಥಗಳು, ಗುರುಗಳು ಪಾಪಕ್ಷಮಾಪಣಕ್ಕೋಸ್ಕರ ಎಷ್ಟು ಮಾರ್ಗಗಳಾದರೂ ಪ್ರತಿಪಾದಿಸಲೀ. ದೇವರ ಬಾಯಿಂದ ಹೊರಬಿದ್ದ ವೇದ ಮಾತ್ರ ಪಾಪಕ್ಷಮಾಪಣಕ್ಕೋಸ್ಕರ ಬಲಿ, ರಕ್ತ ಪ್ರೋಕ್ಷಣ ಅಗತ್ಯವೆಂದೇ ಹೇಳುತ್ತಿದೆ."</u>**

ಪೂರ್ವದಲ್ಲಿ ಒಬ್ಬ ಮನುಷ್ಯನಿಗೆ ಹುಚ್ಚು ಹೆಚ್ಚಾಗಿ ರುಮಾಲನ್ನು (ಟವಲನ್ನು) ತಲೆಗೆ ಸುತ್ತೆಂಬುವುದು ಬಿಟ್ಟು ಒನಕೆಯನ್ನು ತಂದು ಸುತ್ತೆಂದನಂತೆ! ನೀನೇ ಸುತ್ತಿಕೊ ಎಂದು ಪಕ್ಕದವರು ಹೇಳಿದರೆ, ನನ್ನ ಕೈಗಳಿಗೆ ಒನಕೆಯನ್ನು ಸುತ್ತಿಕೊಳ್ಳುವ ಬಲ ಇಲ್ಲ. ಆದ್ದರಿಂದ ನಿಮ್ಮನ್ನು ಸುತ್ತಿರೆಂದು ಹೇಳಿದ್ದೇನೆ ಅಂದನಂತೆ. ಹುಚ್ಚು ಹೆಚ್ಚಾಗಿಹೋದ ಮೆದುಳು ಏನನ್ನು ಸಕ್ರಮವಾಗಿ ಯೋಚಿಸದೆ ಎಲ್ಲಾ ತಪ್ಪಾಗಿಯೇ ನಿರ್ಣಯಿಸುತ್ತದೆ. ಹಾಗೆಯೇ ಆಧ್ಯಾತ್ಮಿಕ ವಿದ್ಯೆಯಲ್ಲಿ ಮತಿಭ್ರಮಿಸಿದವರಾಗಿ ಕೆಲವರು ಮಾತನಾಡುತ್ತಿರುತ್ತಾರೆ. ಅಂತಹವರಿಗೆ ಒಂದು ಪದ್ಧತಿ ಎನ್ನುವುದು ಇರುವುದಿಲ್ಲ. ಒಂದು ಶಾಸ್ತ್ರವನ್ನು ಆಧಾರ ಮಾಡಿಕೊಂಡು ಮಾತನಾಡುವುದೂ ಇರುವುದಿಲ್ಲ. ಹೇಗೆ ಊಹೆ ಬಂದರೆ ಹಾಗೆ ಮಾತನಾಡುತ್ತಿರುತ್ತಾರೆ. ನಾವು ಮಾತನಾಡುವ ಮಾತು ಸಮಂಜಸವಾದುದಾ ಅಲ್ಲವಾ ಎಂದು ಯಾವುದು ಯೋಚಿಸುವುದಿಲ್ಲ. ಅದೇ ವಿಧವಾಗಿ ಮೇಲಿನ ವಾಕ್ಯ ಕಾಣಿಸುತ್ತಿದೆ. ದೇವರನ್ನು ಕುರಿತು ಧರ್ಮಶಾಸ್ತ್ರವನ್ನು (ಬ್ರಹ್ಮ ವಿದ್ಯಾಶಾಸ್ತ್ರ ವನ್ನು) ಆಧಾರ ಮಾಡಿಕೊಂಡು ಮಾತನಾಡಬೇಕಾಗಿರುತ್ತದೆ. ಹಾಗೆ ಶಾಸ್ತ್ರಾಧಾರ ಇಲ್ಲದಂತೆ ಮಾತನಾಡಿದರೆ ದೇವರ ಬೆಲೆಯನ್ನು ಕಡಿಮೆ ಮಾಡಿದಂತಾಗುತ್ತದೆ. ಮೇಲಿನ ವಾಕ್ಯದಲ್ಲಿ ಯಾವ ಶಾಸ್ತ್ರಾಧಾರ ಇಲ್ಲ. ಅಷ್ಟೇ ಅಲ್ಲದೆ ಬುದ್ಧಿ ಬೆಳೆಯದ ಚಿಕ್ಕ ಮಕ್ಕಳಿಗೆ ಕಾಕಮ್ಮ, ಗುಬ್ಬಮ್ಮ ಕಥೆಗಳು ಹೇಳಿದಂತೆ ಮೇಲಿನ ವಾಕ್ಯವಿದೆ.

ಕೇಳುವುದು ಸತ್ಯವಾ ಅಸತ್ಯವಾ ಎಂದು ಆಲೋಚಿಸಲಾರದ ಚಿಕ್ಕ ಮಕ್ಕಳು ಹೇಳುವುದನ್ನು ಕೇಳುತ್ತಾರೆ. ಹಾಗೆಯೇ ಕೆಲವರಿಗೆ ಏನು ಹೇಳಿದರೂ ಅಸತ್ಯವನ್ನು ಸಹ ಸತ್ಯವಾಗಿಯೇ ಭಾವಿಸಿಕೊಂಡು ಕೇಳುತ್ತಿರುತ್ತಾರೆ. ಅದೇ ದೊಡ್ಡಮಕ್ಕಳಾದರೆ ತಿರುಗಿ ಪ್ರಶ್ನಿಸುತ್ತಾರೆ. ಹೇಳಿದ ವಿಷಯದಲ್ಲಿ ತಪ್ಪುಗಳಿದ್ದರೆ ವಿವರಣೆ ಕೋರುತ್ತಾರೆ. ಹಾಗೆಯೇ ಮೇಲಿನ ವಾಕ್ಯವನ್ನು ಕುರುಡರಹಾಗೆ ಕೇಳದಂತೆ ತಿರುಗು ಪ್ರಶ್ನೆ ಹಾಕುತ್ತಾ ವಿವರ ಕೇಳುತ್ತಿದ್ದೇವೆ.

ದೇವರು ಧರ್ಮಗಳ ಮೇಲೆ ಆಧಾರಪಟ್ಟಿದ್ದಾನೆ. ದೇವರನ್ನು ತಿಳಿಯುವುದಕ್ಕೆ ಧರ್ಮಗಳ ಆಧಾರದಿಂದ ತಿಳಿದುಕೊಳ್ಳಬಹುದು. ದೇವರಿಗೆ ಅಂತ ಪ್ರಾಥಮಿಕ ಧರ್ಮ ಒಂದು ಇದೆ. ದೇವರು ರೂಪ, ನಾಮ, ಕ್ರಿಯಾ ರಹಿತನು ಎನ್ನುವುದು ಮೊದಲ ಧರ್ಮ. ಈ ವಾಕ್ಯ ಮೂರು ದೈವ ಗ್ರಂಥಗಳಲ್ಲಿಯೂ ಗೋಚರಿಸುತ್ತಿದೆ. ಈ ವಾಕ್ಯವನ್ನನುಸರಿಸಿ ದೇವರಿಗೆ ಆಕಾರ ಇಲ್ಲವೆಂದು, ಹೆಸರು ಇಲ್ಲವೆಂದು ಕೆಲಸವೂ ಇಲ್ಲವೆಂದು ತಿಳಿಯುತ್ತಿದೆ. ಈ ಪ್ರಾಥಮಿಕ ಧರ್ಮವನ್ನು ಅಲ್ಲವೆಂದು ದೇವರಿಗೆ ರೂಪವಿದೆ ಎಂದರೆ ಅದು ಪೂರ್ತಿ ಅಸತ್ಯವೆಂದು, ಹಾಗಿರುವವನು ದೇವರು ಅಲ್ಲವೆಂದು ಹೇಳಬಹುದು. ಹಾಗೆಯೇ ದೇವರಿಗೆ ಹೆಸರಿದೆ ಎಂದಾಗಲಿ, ಆತನಿಗಂತೂ ಕೆಲಸ ಇದೆಯೆಂದಾಗಲಿ ಯಾರಾದರೂ ಅಂದಿದ್ದಾರೆಂದರೇ ಆ ಮಾತು ದೇವರ ಧರ್ಮಕ್ಕೆ ವಿರುದ್ಧವೆಂದು, ಅದು ಪೂರ್ತಿ ಅಸತ್ಯವಾದ ಮಾತೆಂದು ಹೇಳಬಹುದು. ಆದರೆ ದೇವರಿಗೆ ಕೆಲಸವಿಲ್ಲ ಆತನು ಕೆಲಸ ಮಾಡುವುದಿಲ್ಲ ಎನ್ನುವ ಮಾತಿಗೆ ವಿರುದ್ಧವಾಗಿ ಮೇಲಿನ ವಾಕ್ಯವಿರುವಂತೆ ತಿಳಿಯುತ್ತಿದೆ. ಸಾಕ್ಷಾತ್ ಸೃಷ್ಟಿಕರ್ತನ ಬಾಯಿಂದ ಬಂದ ಮಾತುಗಳನ್ನು ಲೆಕ್ಕಿಸಿಕೊಳ್ಳದೆ ಬಿಟ್ಟರೆ ಅದು ದೈವದ್ರೋಹ ಆಗುತ್ತದೆಂದು ಹೇಳಿದ್ದಾರೆ. ಈಗ ನಾವು ಏನು ಮಾಡುತ್ತಿದ್ದೇವೆಂದರೆ, ಅಸತ್ಯವನ್ನು ಹೇಳಿ ಭಯವಿಟ್ಟು ನೀವು ಹೇಳಿದಂತೆ ಕೇಳಬೇಕೆಂದು ಪ್ರಯತ್ನಿಸುತ್ತಿದ್ದೀರ. ದೇವರ ವಿಷಯದಲ್ಲಿ ಅಸತ್ಯವನ್ನು, ಅಧರ್ಮವನ್ನು ಬೋಧಿಸುವುದರಿಂದ ನೀವು ದೈವದ್ರೋಹ ಮಾಡಿದಂತಾಗುತ್ತದೆ.

ದೇವರು ಕ್ರಿಯಾರಹಿತನು ಎಂದು ಅಂದರೆ ದೇವರು ಕೆಲಸವನ್ನು ಮಾಡದವನೆಂದು ಅರ್ಥ ಮಾಡಿಕೊಳ್ಳಬೇಕು. ಮೇಲಿನ ವಾಕ್ಯದಲ್ಲಿ ಸೃಷ್ಠಿಕರ್ತನಾದ ದೇವರು ಸ್ವತಃವಾಗಿ ಹೇಳಿದಂತೆ ಬರೆಯುವುದರಿಂದ ದೇವರಿಗೆ ಕೆಲಸವನ್ನು ಕಲ್ಪಿಸಿ ಹೇಳಿದಂತಾಗಿದೆ. ಹಾಗೆ ಹೇಳಿದ ಮಾತನ್ನು ಕೇಳದಿರುವುದು ಭಕ್ತಿಹೀನತೆ, ದೈವದ್ರೋಹ ಆಗುತ್ತದೆಂದು ಹೇಳಿದ್ದಾರಲ್ಲವೆ! ಆದರೆ ನಾವು ಈಗ ಧರ್ಮವಿರುದ್ಧವೆಂದು ಆ ಮಾತುಗಳನ್ನು ಪೂರ್ತಿಯಾಗಿ ಖಂಡಿಸುತ್ತಿದ್ದೇವೆ. ಅಷ್ಟೇ ಅಲ್ಲದೆ ಇಂದ್ರನೆಂಬುವವನು ಇದ್ದಾನೋ ಇಲ್ಲವೋ ಸಹ ಯಾರಿಗೂ ತಿಳಿಯದು. ಇದ್ದಂತೆ ಯಾವುದೇ ಚರಿತ್ರೆ ಆಧಾರವಾಗಲಿ, ಶಾಸ್ತ್ರಾಧಾರವಾಗಲಿ ಇಲ್ಲ. ಅಂತಹದರಲ್ಲಿ ಇಂದ್ರನನ್ನು ತಂದು ಹೇಳಬೇಕಾದ ಅವಶ್ಯಕತೆ ಏನಿದೆ? ಅಷ್ಟೇ ಅಲ್ಲದೆ ಇಂದ್ರನೇ ಯೇಸು ಎಂದು ಹೇಳುವುದು ಪೂರ್ತಿ ವಿಚಿತ್ರ. ಅಲ್ಲಿಗೆ ಸುಮ್ಮನಾಗದೆ ಆತನಿಗಿರುವ ಪಾಪಕ್ಕೆ ಪರಿಹಾರವಾಗಿ ಎತ್ತನ್ನು ಬಲಿ ಕೊಟ್ಟಿದ್ದಾನೆಂದು, ಪಾಪ ಕ್ಷಮಾಪಣೆಗೋಸ್ಕರ ರಕ್ತಪ್ರೋಕ್ಷಣೆ (ರಕ್ತ ಸೋರಿಸುವುದು) ಮಾಡುವುದರಿಂದ ಪಾಪ ಪರಿಹಾರವಾಗುತ್ತದೆಂದು ದೇವರು ಹೇಳಿದಂತೆ ಹೇಳಿದ್ದಾನೆ. ಅದಕ್ಕೆ ನಾವು ಏನನ್ನುತ್ತಿದ್ದೇವೆಂದರೆ ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ ಎಂಬ ಧರ್ಮಕ್ಕೆ ವಿರುದ್ಧವಾಗಿ ಈ ಮಾತನ್ನು ಹೇಳಿದಂತಾಗುತ್ತಿದೆ. ರಕ್ತಪ್ರೋಕ್ಷಣೆಗೆ ಪಾಪಪರಿಹಾರಕ್ಕೆ ಏನು ಸಂಬಂಧ ಇದೆಯೆಂದು ಕೇಳುತ್ತಿದ್ದೇವೆ. ರಕ್ತಪ್ರೋಕ್ಷಣೆಯೆಂದು ಹೇಳಿ ಎತ್ತನ್ನು ಬಲಿ ಕೊಟ್ಟಂತೆ ಹೇಳಿದ್ದಾರೆ. ಕೋಳಿ, ಕುರಿಗಳು ಮೊದಲುಗೊಂಡು ಹಸುಗಳನ್ನು, ಕುದುರೆಗಳನ್ನು, ಕೋಣಗಳನ್ನು ಕ್ಷುದ್ರದೇವತಾ ಪೂಜೆಗಳಲ್ಲಿ ಬಲಿ ಕೊಡುವುದು ಇಂದಿಗೂ ಇದೆ. ಹೀಗೆ ಬಲಿಗಳು ಕೊಡುವುದು ಭಕ್ತಿ ಎನ್ನುತ್ತೇವಾ ಇಲ್ಲವೆ ಜ್ಞಾನ ಎನ್ನುತ್ತೇವಾ? ಧನಿಕರಾಗಿರುವವರು ಎಷ್ಟೋ ಪಾಪ ಮಾಡಿ, ಎಷ್ಟೋ ಬಲಿಗಳು ಕೊಡಬಲ್ಲರು. ಆದರೆ ಅವರ ಪಾಪ ಹೋಗುತ್ತದಾ? ಪೂರ್ವದಲ್ಲಿ ಮನುಷ್ಯರು ತಮ್ಮ ಪಾಪವನ್ನು ಪರಿಹಾರ ಮಾಡಿಕೊಳ್ಳುವುದಕ್ಕೆ ನೇರವಾಗಿ ಮನುಷ್ಯನಾದ ಯೇಸುನನ್ನೇ ರಕ್ತ ಸೋರುವಹಾಗೆ ಮಾಡಿ ಶಿಲುಬೆ ಮೇಲೆ

ಬಲಿ ಕೊಟ್ಟಿದ್ದಾರೆಂದು ಕೆಲವರು ಹೇಳಿಕೊಂಡುಬರುವುದು ಸಹ ಕೇಳಿದ್ದೇವೆ. ಅದೇ ನಿಜವಾದರೆ ಆ ವಿಧವಾಗಿ ಪಾಪ ಹೋಗುವ ಹಾಗೆ ಇದ್ದರೆ ಸಾಲಾಗಿ ಹತ್ತುಜನ ಮನುಷ್ಯರನ್ನಾದರೂ ಬಲಿಕೊಡುವ ಧನಿಕರು, ಬಲಾಢ್ಯರು ಇದ್ದಾರೆ. ಇನ್ನೊಬ್ಬರನ್ನು ಹಿಂಸಿಸಿ ರಕ್ತ ಸೋರುವಂತೆ ಮಾಡುವುದರಿಂದಾಗಲಿ, ಇತರ ಪ್ರಾಣಿಗಳನ್ನು ಸಾಯಿಸಿ ರಕ್ತ ತರ್ಪಣ ಮಾಡುವುದರಿಂದಾಗಲಿ, ಮನುಷ್ಯರು ಮಾಡಿಕೊಂಡ ಪಾಪಗಳು ಹೋಗುತ್ತವೆಂದು ಯಾವ ಧರ್ಮಶಾಸ್ತ್ರದಲ್ಲಾದರೂ ಹೇಳಿದ್ದಾರಾ?

ಮನುಷ್ಯನ ಜೀವನ ಹೇಗೆ ಇದೆ? ಆ ಜೀವನದಲ್ಲಿ ಪಾಪಪುಣ್ಯಗಳನ್ನು ಮನುಷ್ಯ ಹೇಗೆ ಸಂಪಾದಿಸಿಕೊಳ್ಳುತ್ತಿದ್ದಾನೆ? ಸಂಪಾದಿಸಿಕೊಂಡ ಪಾಪಪುಣ್ಯಗ ಳನ್ನು ಹೇಗೆ ಅನುಭವಿಸುತ್ತಿದ್ದಾನೆ? ಕೊನೆಗೆ ಮೋಕ್ಷ ಹೇಗೆ ಹೊಂದುತ್ತಾನೆ? ಎನ್ನುವ ಒಟ್ಟು ಎಲ್ಲಾ ಮನುಷ್ಯನ ವಿಷಯವನ್ನು ಗಟ್ಟಿ ಧ್ವನಿಯೊಂದಿಗೆ ಸಹ ಬಿಡಿಸಿ ಹೇಳಿರುವವು ಮೂರು ದೈವ ಗ್ರಂಥಗಳು, ಮೂರು ದೈವ ಗ್ರಂಥಗಳಲ್ಲಿಯೇ ಧರ್ಮಶಾಸ್ತ್ರ ಒಳಗೊಂಡಿದೆ. ದೇವರ ಧರ್ಮವನ್ನು, ಮನುಷ್ಯ ಕರ್ಮವನ್ನು ಧರ್ಮಶಾಸ್ತ್ರದಲ್ಲಿಯೇ ತಿಳಿಯಬಹುದು. ಧರ್ಮಶಾಸ್ತ್ರ ಹೊರತು ವೇದಗಳು, ಪುರಾಣಗಳು ಧರ್ಮಗಳನ್ನು ಕರ್ಮಗಳನ್ನು ತಿಳಿಸಲಾರವು. ಅಂತಹದರಲ್ಲಿ ಯಾವ ದೈವ ಗ್ರಂಥದಲ್ಲಿ ಇಲ್ಲದ ಬಲಿಯನ್ನು, ವೇದಗಳು ಹೇಳಿವೆಯೆಂದು ಅವುಗಳನ್ನು ಕೆಲವರು ಮಾಡುವವರೆಂದು, ಅವುಗಳಿಂದ ರಕ್ತಪ್ರೋಕ್ಷಣ ನಡೆದು ಪಾಪ ಪರಿಹಾರವಾಗಿದೆಯೆಂದು ಹೇಳುವುದು ವಿಚಿತ್ರವಾದ ಮಾತಾಗಿ ಇದೆ. ಈ ಪದ್ಧತಿ ಹಿಂಸೆಯನ್ನು ಪ್ರೇರೆಪಿಸುವುದು ಹೊರತು ಏನಾದರೂ ಇದೆಯಾ ನೀವೇ ಆಲೋಚಿಸಿರಿ. ನನಗೆ ಎಷ್ಟೋ ಆರ್ಥಿಕ ಸಾಮರ್ಥ್ಯ ಇದೆಯೆಂದು ನಾನು ಇಷ್ಟಬಂದಂತೆ ಪಾಪಗಳು ಮಾಡುತ್ತಾ, ಅವು ಹೋಗುವುದಕ್ಕೆ ನೂರು ಪ್ರಾಣಿಗಳನ್ನೊ, ಒಬ್ಬ ಮನುಷ್ಯನನ್ನೊ ಬಲಿ ಕೊಟ್ಟು ಪಾಪಗಳಿಂದ ತಪ್ಪಿಸಿಕೊಳ್ಳುತ್ತೇನೆಂದುಕೊಳ್ಳುವುದು ಪೂರ್ತಿ ತಿಳುವಳಿಕೆ ಇಲ್ಲದ ವಿಧಾನ ವಾಗುತ್ತದೆ.

ಈ ದಿನ ಭೂಮಿ ಮೇಲೆ ಮೂರು ದೈವಗ್ರಂಥಗಳನ್ನು ಆಧಾರ ಮಾಡಿಕೊಂಡು ಮೂರು ಮತದವರು ಚಲಾವಣೆ ಆಗುತ್ತಿದ್ದಾರಲ್ಲವೆ! ಆ ಮೂರು ಮತಗಳಲ್ಲಿ ಒಂದು ಕ್ರೈಸ್ತವರು ಹೊರತು ಉಳಿದ ಹಿಂದೂಗಳಾಗಲಿ, ಮುಸ್ಲಿಮ್‌ರಾಗಲಿ ಅವರ ಗ್ರಂಥಗಳಲ್ಲಿ ಈ ಬಲಿ ವಿಧಾನ ಇರುವಂತೆ ಯಾರೂ ಹೇಳಲಿಲ್ಲ. ಭಗವದ್ಗೀತೆಯಲ್ಲಾಗಲಿ, ಖುರ್‌ಆನ್ ಗ್ರಂಥದಲ್ಲಾಗಲಿ, ಬಲಿ ಕೊಡುವುದರಿಂದ, ರಕ್ತ ತರ್ಪಣೆ ಮಾಡುವುದರಿಂದ ಪಾಪಗಳು ಹೋಗುತ್ತವೆಂದು ಹೇಳಲಿಲ್ಲ. ಇನ್ನೂ ರಕ್ತಪ್ರೋಕ್ಷಣೆ ಎನ್ನುವ ಪದವನ್ನು ಬಳಸುತ್ತಾ, ರಕ್ತವನ್ನು ಚಿಂದಿಸುವುದರಿಂದ ಪಾಪಪರಿಹಾರ ನಡೆಯುತ್ತದೆಂದು, ಈ ವಿಷಯವನ್ನು ವೇದಗಳಲ್ಲಿ ಸಹ ಹೇಳಿದ್ದಾರೆಂದು, ತಮ್ಮ ಬೈಬಲ್ ಗ್ರಂಥದಲ್ಲಿ ಸಹ ಯೇಸು ಪ್ರಭುವು ತನ್ನ ರಕ್ತದಿಂದ ಪಾಪಪರಿಹಾರವಾಗುತ್ತದೆಂದು ಹೇಳಿದ್ದಾನೆಂದು, ಆದ್ದರಿಂದ ಪಾಪಿಗಳ ನಿಮಿತ್ತ ತನ್ನ ರಕ್ತವನ್ನು ಶಿಲುಬೆ ಮೇಲೆ ರಕ್ತ ಸೋರಿಸಿದ್ದಾನೆಂದು, ಯೇಸು ರಕ್ತದಿಂದ ಕ್ರೈಸ್ತರ ಪಾಪಗಳೆಲ್ಲವೂ ಹೋಗಿವೆ ಎಂದು, ಇನ್ನೂ ಯಾರಾದರೂ ಬೇರೆ ಮತದವರು ಕ್ರೈಸ್ತವ ಮತದೊಳಗೆ ಬಂದು ಯೇಸುನನ್ನು ತಮ್ಮ ದೇವರಾಗಿ ಒಪ್ಪಿಕೊಂಡರೆ ಅವರ ಪಾಪಗಳು ಸಹ ಹೋಗುತ್ತವೆಂದು, ಕ್ರೈಸ್ತವ ಬೋಧಕರು ಎಷ್ಟೋ ಪ್ರಚಾರ ಮಾಡಿದ್ದಾರೆ. ಈಗಲೂ ಸಹ ಅದೇ ಮಾತನ್ನು ಹೇಳುತ್ತಲೇ ಇದ್ದಾರೆ.

ಬೈಬಲ್ ಗ್ರಂಥದಲ್ಲಿ ಯೇಸು ಹೇಳಿದ ನಾಲ್ಕು ಸುವಾರ್ತೆಗಳಲ್ಲಿ ಎಲ್ಲಾದರೂ ಯೇಸು ರಕ್ತದಿಂದ ಕೈಸ್ತವರ ಪಾಪ ಹೋಗುತ್ತದೆಂದು ಹೇಳಿದ್ದಾನಾ? ಎಂದು ಪ್ರಶ್ನಿಸುತ್ತಿದ್ದೇವೆ. ನಾನು ಕೇಳುತ್ತಿರುವ ಈ ಪ್ರಶ್ನೆಯನ್ನು ಕೆಲವರು ಸರಳವಾಗಿ ತೆಗೆದುಕೊಂಡು "ಯೇಸು ಹೇಳಿದ ಮಾತನ್ನೇ ನಾವು ಹೇಳುತ್ತಿದ್ದೇವೆ. ಮತ್ತಾಯ ಸುವಾರ್ತೆ 26ನೇ ಅಧ್ಯಾಯದಲ್ಲಿ 28ನೇ ವಾಕ್ಯದಲ್ಲಿ" ಇದು ನನ್ನ ರಕ್ತ, ಅಂದರೆ ಪಾಪಕ್ಷಮಾಪಣೆ ನಿಮಿತ್ತ ಅನೇಕರಿಗೋಸ್ಕರ **ಚಿಂದಿಸಲ್ಪಡುತ್ತಿರುವ ನಿಬಂಧನ ರಕ್ತ"** ಎಂದು ಇದೆ ಅಲ್ಲವೆ! ಈ ವಾಕ್ಯ ಯೇಸು ಹೇಳಿರುವುದಕ್ಕೆ ಸಾಕ್ಷಿ ಅಲ್ಲವೆ?" ಎಂದು ಕೇಳಬಹುದು. ಅದಕ್ಕೆ ನಾವು ಸ್ವಲ್ಪ ಆಶ್ಚರ್ಯಪಟ್ಟು,

ಬೈಬಲ್ ಗ್ರಂಥದಲ್ಲಿನ ಯೇಸುಮಾತನ್ನು ಅವರ ಪಾಪಗಳು ಹೋಗುವ ನಿಮಿತ್ತ ಯೇಸು ರಕ್ತ ಚಿಂದಿಸಲ್ಪಟ್ಟಿದೆ ಎಂದು ಅರ್ಥ ಮಾಡಿಕೊಂಡಿರುವುದಕ್ಕೆ, ಮಾಯೆ ಇವರನ್ನು ಎಷ್ಟಾಗಿ ಯಾಮಾರಿಸಿದೆಯೊ ಎಂದು ಅಂದುಕೊಂಡಿದ್ದೇವೆ. ಯೇಸು ಎಲ್ಲಿಯಾಗಲಿ ತನ್ನ ರಕ್ತವನ್ನು ಸೋರಿಸುವುದರಿಂದ, ತಮ್ಮ ರಕ್ತದಿಂದ ಕ್ರೈಸ್ತವರ ಪಾಪಗಳು ತೊಳೆದುಹಾಕಲ್ಪಡುತ್ತವೆಯೆಂದೂ ಹೇಳಲಿಲ್ಲವೆಂದು ಈಗಲೂ ಸಹ ಹೇಳುತ್ತಿದ್ದೇನೆ. ಮತ್ತಯಿ ಸುವಾರ್ತೆ 26ನೇ ಅಧ್ಯಾಯ 28ನೇ ವಾಕ್ಯ ಹೇಳುವಾಗ ಒಂದು ಬಟ್ಟಲಲ್ಲಿ ದ್ರಾಕ್ಷರಸವನ್ನು ತೆಗೆದುಕೊಂಡು ಅಲ್ಲಿರುವ ತನ್ನ ಶಿಷ್ಯರಿಗೆ ಕೊಡುತ್ತಾ, “ಇದು ನನ್ನ ರಕ್ತ” ಎಂದಿದ್ದಾನೆ. ಆದರೆ ತನ್ನ ರಕ್ತವಾಗಿ ಹೋಲಿಸಿ ಹೇಳಿ ದ್ರಾಕ್ಷರಸವನ್ನು ಕೊಟ್ಟಿದ್ದಾನೆಂದು ಮರೆಯಬಾರದು. ಆಗಲೂ ಸಹ ತನ್ನ ಮಾತನ್ನು ಎಲ್ಲಿ ಅಪಾರ್ಥ ಮಾಡಿಕೊಳ್ಳುತ್ತಾರೋ ಎಂದು ಇದು ನನ್ನ ರಕ್ತ ಎಂದು ಹೇಳಿದ ತಕ್ಷಣ ವಿವರವಾಗಿ ಹೇಳುತ್ತೇನೆ ಕೇಳಿರಿ ಎನ್ನುವಂತೆ ಹೇಳಿದ್ದಾನೆ. ಇದು ನನ್ನ ರಕ್ತ, ಅಂದರೆ ಎಂದು ನಂತರ ಪಾಪಕ್ಷಮಾಪಣೆಗೋಸ್ಕರ ಎಂದು ಹೇಳುವುದು ನಡೆದಿದೆ. ತನ್ನ ರಕ್ತ ಎನ್ನುವುದು ಯಾವುದಕ್ಕೋಸ್ಕರ ಎನ್ನುವ ಪ್ರಶ್ನೆಗೆ ಉತ್ತರ ಇರುವಂತೆ ಪಾಪಕ್ಷಮಾಪಣೆಗೋಸ್ಕರ ಎಂದಿದ್ದಾನೆ. ಆ ಮಾತಿನಲ್ಲಿ ಯಾವ ಅನುಮಾನವಿಲ್ಲ. ಆತನ ರಕ್ತ ಪಾಪಕ್ಷಮಾಪಣೆಗೋಸ್ಕರವೆ ಎಂದು ಸ್ಪಷ್ಟವಾಗಿ ಹೇಳುವುದು ನಡೆದಿದೆ. ಸಮಸ್ತ ಕ್ರೈಸ್ತವರು ಇಲ್ಲಿಯೇ ಅಪಾರ್ಥ ಮಾಡಿಕೊಂಡಿದ್ದಾರೆಂದು ಹೇಳುತ್ತಿದ್ದೇನೆ. ಯೇಸು ರಕ್ತ ಕ್ರೈಸ್ತವರಿಗೋಸ್ಕರ ಎಂದು ಹೇಳಿದ್ದಾನಾ, ಸಮಸ್ತ ಮಾನವರಿಗು ಎಂದು ಹೇಳಿದ್ದಾನಾ ಎಂದು ನೋಡಿದರೆ, ಅಲ್ಲಿ ಕ್ರೈಸ್ತವರಿಗೆಂದು ಹೇಳಲಿಲ್ಲ, ಮಾನವರಿಗೆಲ್ಲಾ ಎಂದು ಹೇಳಿದ್ದಾನೆ. ಅಂತಹದರಲ್ಲಿ ಕ್ರೈಸ್ತವಮತದೊಳಗೆ ಬಂದು ಯೇಸುನನ್ನು ತಮ್ಮ ದೇವರಾಗಿ ಒಪ್ಪಿಕೊಂಡವರಿಗೆ ಮಾತ್ರವೇ ಪಾಪಕ್ಷಮಾಪಣೆ ಎಂದು ಹೇಳುವುದು ತಪ್ಪಲ್ಲವೆ? ಯೇಸು ಹೇಳದಮಾತನ್ನು ಕ್ರೈಸ್ತವರು ಏಕೆ ಹೇಳಬೇಕಾಗಿ ಬಂದಿದೆ?

ಯೇಸು ಹೇಳಿದ ಮಾತು ಅವರಿಗೆ ಅರ್ಥವಾಗದೆಯೊ, ಅಥವಾ ಅರ್ಥವಾದರೂ ತಮ್ಮ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವುದಕ್ಕೊ, ಆ ವಿಧವಾಗಿ ಅವರು ಹೇಳಿದ್ದಾರೆಂದು ತಿಳಿಯುತ್ತಿದೆ. ಯೇಸು ಹೇಳಿದ ಮಾತುಗಳಲ್ಲಿ ಮನುಷ್ಯರೆಲ್ಲರ ಪಾಪಕ್ಷಮಾಪಣೆಗೋಸ್ಕರ ಶಿಲುಬೆ ಮೇಲೆ ರಕ್ತ ಸೋರಿ ಸುತ್ತೇನೆಂದೊ, ತನ್ನ ರಕ್ತವನ್ನು ಚಿಂದಿಸುತ್ತೇನೆಂದೊ ಅಲ್ಲಿ ಹೇಳಿದ್ದಾನಾ? ಎಂದು ಪ್ರಶ್ನಿಸಿದರೆ ನಡೆಯುತ್ತಿರುವ ಆ ಕಾಲದಲ್ಲಿ (ವರ್ತಮಾನ ಕಾಲದಲ್ಲಿ) ಚಿಂದಿಸಲ್ಪಡುತ್ತಿದೆಯೆಂದು ಹೇಳಿದ್ದಾನೆ ಹೊರತು ನಡೆಯುವಂತಹ ಭವಿಷ್ಯತ್ ಕಾಲದಲ್ಲಿ ನನ್ನ ರಕ್ತವನ್ನು ಚಿಂದಿಸುತ್ತೇನೆಂದು ಹೇಳಲಿಲ್ಲವೆಂದು ಗಮನಿಸಿರಿ. ನಡೆಯುತ್ತಿರುವ ವರ್ತಮಾನ ಕಾಲದಲ್ಲಿ ನಡೆದುಹೋದ ಭೂತಕಾಲ ಮೂರು ವರ್ಷಗಳಿಂದ ಇಂದಿನವರೆಗು ನನ್ನ ರಕ್ತವನ್ನು ಚಿಂದಿಸುತ್ತಲೇ ಇದ್ದೇನೆಂದು ಹೇಳಿ ಕೊನೆಯಲ್ಲಿ ಎಲ್ಲರಿಗೂ ಅರ್ಥವಾಗುವಂತೆ ಒಂದುಮಾತು ಹೇಳಿದ್ದಾನೆ ಅದು ಏನೆಂದರೆ! ಅನೇಕರಿಗೋಸ್ಕರ ಚಿಂದಿಸಲ್ಪಡುತ್ತಿರುವ 'ನಿಬಂಧನ ರಕ್ತ' ಎಂದು ಅಂದಿದ್ದಾನೆ. ಈ ವಾಕ್ಯಕ್ಕೆಲ್ಲಾ ನಿಜವಾದ ಅರ್ಥ ನಿಬಂಧನ ರಕ್ತ ಎಂದು ಹೇಳುವುದರಲ್ಲಿಯೇ ಇದೆ.

'ನಿಬಂಧನ' ಎಂದರೆ ಯಾವ ಬಂಧನ ಇಲ್ಲದಿರುವುದೆಂದು ಅರ್ಥ. ಎಲ್ಲಾ ಬಂಧಗಳಿಂದ ಬಿಡುಗಡೆ ಮಾಡುವುದು, ಯಾವ ಬಂಧವು ತನ್ನನ್ನು ಬಂಧಿಸದಿರುವುದಾದ ದೈವ ಜ್ಞಾನವನ್ನು ನಿಬಂಧನ ರಕ್ತವೆಂದು ಹೇಳಲಾಗಿದೆ. ಆಗ ದ್ರಾಕ್ಷರಸವನ್ನು ಕೊಟ್ಟು ಅದನ್ನು ರಕ್ತವಾಗಿ ವರ್ಣಿಸಿದ್ದಾನೆ. ಶರೀರದಲ್ಲಿ ರಕ್ತ ಜೀವನವನ್ನು ಕೊಡುವುದು. ರಕ್ತ ಪ್ರಸರಣೆ ಇಲ್ಲದೆಹೋದರೆ ಮನುಷ್ಯ ಮರಣಿಸುತ್ತಾನೆ. ಶರೀರದಲ್ಲಿ ಜೀವನಕೊಡುವುದು ರಕ್ತವಾದಹಾಗೆ, ದೇವರಲ್ಲಿ ಜೀವಿಸುವಂತೆ ಮಾಡುವುದು ಜ್ಞಾನ. ಯೇಸು ಶರೀರದಲ್ಲಿ ರಕ್ತದೊಂದಿಗೆ ಅಣುಅಣುವಿನಲ್ಲಿಯು ಜ್ಞಾನವೇ ತುಂಬಿದೆ. ಆದ್ದರಿಂದ ಆತನು ಮೂರು ವರ್ಷಗಳಿಂದ ತನ್ನ ಜ್ಞಾನವನ್ನೇ ಪ್ರಜೆಗಳಿಗೆ ಹಂಚುತ್ತಿದ್ದಾನೆ. ಆದ್ದರಿಂದ ತನ್ನ ಜ್ಞಾನವನ್ನೇ ಸಮಸ್ತ ಮಾನವರ ಪಾಪಕ್ಷಮಾಪಣೆಗೋಸ್ಕರ ಚಿಂದಿಸಲ್ಪಡುತ್ತಿರುವ

ನಿಬಂಧನ ರಕ್ತ ಎಂದು ಅಂದಿದ್ದಾನೆ. ನಿಬಂಧನ ರಕ್ತವನ್ನು ಎಂದರೆ ಯಾವ ಬಂಧನವೂ ಇಲ್ಲದ ಜ್ಞಾನವನ್ನು ಆಗಲೇ ಎಲ್ಲರಿಗೂ ಹೇಳುತ್ತಿದ್ದಾನೆ. ಆತನಿಂದ ಉಕ್ಕಿಬರುತ್ತಿರುವ ಜ್ಞಾನ ಆ ದಿನಗಳಲ್ಲಿ ಎಲ್ಲರಿಗೂ ಲಭಿಸಿದೆ. ಆಗಲೇ ಎಷ್ಟೋ ನಿಬಂಧನ ಜ್ಞಾನವನ್ನು (ನಿಬಂಧನ ರಕ್ತವನ್ನು) ಎಲ್ಲರ ಮೇಲೆ ಚಿಂದಿಸುತ್ತಲೇ ಇದ್ದಾನೆ. ಹಾಗೆ ಹೇಳಲಾಗಿರುವ ಜ್ಞಾನ ಮನುಷ್ಯರಿಗೆ ಬಂಧನವಾಗಿ ಪಾಪದಿಂದ ಅಥವಾ ಕರ್ಮಗಳಿಂದ ವಿಮುಕ್ತನನ್ನು ಮಾಡುತ್ತಿದೆ. ಎಂದರೆ ಪಾಪದಿಂದ ಕ್ಷಮಾಪಣೆ ಹೊಂದುವಹಾಗೆ ಮಾಡುತ್ತಿದೆ. ಜ್ಞಾನ ತಿಳಿದ ಮನುಷ್ಯನಿಗೆ ಇರುವ ಕರ್ಮಗಳು ಇಲ್ಲದಂತೆ ಸುಟ್ಟುಹೋಗುತ್ತವೆಯೆಂದು ಭಗವದ್ಗೀತೆಯಲ್ಲಿ ಹೇಳಿದಹಾಗೆ, ಪಾಪ ಇಲ್ಲದಂತೆ ಹೋಗುವುದನ್ನೇ ಪಾಪಕ್ಷಮಾಪಣೆ ಎನ್ನುತ್ತಿದ್ದಾರೆ. ಯೇಸು ಶರೀರದಲ್ಲಿನ ಭೌತಿಕ ರಕ್ತವನ್ನು ಕುರಿತು, ಅದು ಸೋರಿಹೋದರೆ ಪ್ರಜೆಗಳಿಗೆ ಪಾಪ ಕ್ಷಮಾಪಣೆ ಉಂಟಾಗುತ್ತದೆಯೆಂದು ಹೇಳಲಿಲ್ಲ. ಆತನು ಹೇಳಿರುವುದು ಜ್ಞಾನವೆಂಬ ಸಾರಾಂಶವನ್ನು ನಿಬಂಧನ ರಕ್ತವೆಂದು ಹೇಳಿದ್ದಾನೆ. ಆ ಮಾತಿನಿಂದ ತನಗೆ ಇಷ್ಟ ಇಲ್ಲದವರು ತಪ್ಪಾಗಿ ಅರ್ಥಮಾಡಿಕೊಂಡು ತನ್ನಕಡೆ ಬಾರದಂತೆ ಇರುವಹಾಗೆ ಮಾಡಿದ್ದಾನೆ.

ಹಿಂದೂಮತದಲ್ಲಿ ತಮ್ಮ ಧರ್ಮಗ್ರಂಥ ಯಾವುದೊ ತಿಳಿಯದ ಸ್ಥಿತಿಯಲ್ಲಿ ಬಹಳಜನ ಇದ್ದಾರೆ. ಬಹಳಮಟ್ಟಿಗೆ ಅಗ್ರಕುಲಗಳೆಂದು ಹೆಸರುವಾಸಿ ಯಾದ ಬ್ರಾಹ್ಮಣರೇ ಭಕ್ತಿಗೂ, ಜ್ಞಾನಕ್ಕೂ ವಾರಸರಾಗಿದ್ದಾರೆ. ಅವರು ಶೂದ್ರರನ್ನು ಮೇಲಕ್ಕೆ ಬಾರದಂತೆ ಮಾಡುವುದಕ್ಕೆ, ತಮ್ಮ ದೊಡ್ಡಸ್ತಿಕೆಯಲ್ಲಿ ಅಂಟಬಾರ ದವರನ್ನಾಗಿ ಇಟ್ಟುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಾ, ಶೂದ್ರರಿಗೆ ಜ್ಞಾನ ತಿಳಿದರೆ ಚೆನ್ನಾಗಿರುವುದಿಲ್ಲವೆಂದು, ಯಾರೂ ತಮ್ಮ ಅಧೀನದಲ್ಲಿ ಇರುವುದಿಲ್ಲವೆಂಬ ಉದ್ದೇಶದಿಂದ ಇರುವಾಗ, ಕ್ರೈಸ್ತವರು ಹಿಂದೂ ಶೂದ್ರರನ್ನು ಪ್ರಲೋಭವಿಟ್ಟು ತಮ್ಮ ಮತದೊಳಗೆ ಬದಲಾಯಿಸಿಕೊಳ್ಳುವುದು ನಡೆಯುತ್ತಿದೆಯೆಂದು ಹೇಳಿಕೊಂಡಿದ್ದೇವೆ. ಅಂತಹ ಸ್ಥಿತಿಯಲ್ಲಿ, ಬ್ರಾಹ್ಮಣರಿಗೆ ಅನುಕೂಲವಾದ ವೇದಗಳೇ ನಮ್ಮ ಮೂಲ ಗ್ರಂಥಗಳೆಂದು ಬ್ರಾಹ್ಮಣರು ಹೇಳುವುದು ನಡೆದಿದೆ.

ಹಿಂದೂಗಳಲ್ಲಿ ದೊಡ್ಡದಾಗಿ ಆಚಾರ ವ್ಯವಹಾರಗಳು ಆಚರಿಸುತ್ತಿರುವ ಬ್ರಾಹ್ಮಣರೇ ದೊಡ್ಡದಾಗಿ ಕಾಣಿಸುವುದರಿಂದ ಅವರ ಮಾತನ್ನೇ ನಂಬಿ ಬಹಳಜನರು ತಮ್ಮ ಮೂಲ ಗ್ರಂಥಗಳು ವೇದಗಳೆಂದು ಹೇಳಿಕೊಳ್ಳುವುದು ನಡೆದಿದೆ. ಹಿಂದೂಗಳು ವೇದಗಳನ್ನು ಗೌರವಿಸುವುದನ್ನು ನೋಡಿದ ಉಳಿದ ಮತದವರು ಅದೇ ವೇದಗಳನ್ನು ಹೇಳುತ್ತಾ, ಅದರಲ್ಲಿನ ಕೆಲವು ವಿಷಯಗಳು ತಮ್ಮ ಮತವನ್ನು ಕುರಿತು ಹೇಳುತ್ತಿವೆಯೆಂದು ಹೇಳುತ್ತಿದ್ದಾರೆ. ವೇದಗಳಲ್ಲಿ ಕ್ರೈಸ್ತವ ಮತವನ್ನು ಕುರಿತು, ಯೇಸುವನ್ನು ಕುರಿತು ಇದೆಯೆಂದು, ವೇದಗಳ ಪ್ರಕಾರ ಯಾರಾದರೂ ಕೊನೆಗೆ ಕ್ರೈಸ್ತವ ಮತವನ್ನೇ ಸೇರಬೇಕಾಗಿದ್ದೇ ಎಂದು ಕ್ರೈಸ್ತರು ತೋರಿಸುತ್ತಿರುವಾಗ, ಅದೇ ರಾಗವನ್ನೇ ಮುಸ್ಲಿಮ್‌ರು ಸಹ ತೆಗೆದುಕೊಂಡಿದ್ದಾರೆ. ತಮ್ಮ ಮತದಲ್ಲಿ ತಿಳುವಳಿಕೆಯುಳ್ಳವರನ್ನು, ಜ್ಞಾಪಕಶಕ್ತಿ ಇರುವವರನ್ನು ವೇದಗಳನ್ನು ಕಲಿತುಕೊಳ್ಳುವ ಹಾಗೆ ಮಾಡಿ, ವೇದಗಳನ್ನು ಧಾರಾಳವಾಗಿ ಹೇಳುತ್ತಾ, ವೇದಗಳು ಮುಸ್ಲಿಮ್ ಮತವನ್ನೇ ಸಮರ್ಥಿಸುತ್ತಿವೆಯೆಂದು, ವೇದಗಳು ತಮ್ಮ ಪ್ರವಕ್ತನನ್ನು ಕುರಿತು ಹೇಳಿವೆಯೆಂದು ಸಹ ಪ್ರಚಾರ ಮಾಡುತ್ತಿದ್ದಾರೆ.

ಹಿಂದೂಮತದಲ್ಲಿ ನಾವೇ ತಿಳಿದವರೆಂದು, ನಾವೇ ಹಿಂದೂ ಮತಕ್ಕೆ ದೊಡ್ಡ ದಿಕ್ಕೆಂದು ಹೇಳಿಕೊಳ್ಳುವ ಅಗ್ರಕುಲವಾದ ಬ್ರಾಹ್ಮಣರು ತಮಗೆ ವಿರುದ್ಧವಾಗಿರುವ ಭಗವದ್ಗೀತೆಯನ್ನು ಅಡಗಿಸಿ, ತಮಗೆ ಅನುಕೂಲವಾಗಿರುವ ವೇದಗಳನ್ನು ಪ್ರೋತ್ಸಾಹಿಸಿ ಹೇಳುವುದರಿಂದ, ಮೂಲ ಗ್ರಂಥವಾದ ಭಗವದ್ಗೀತೆವೊಂದರ ಜ್ಞಾನ ಹಿಂದೂಗಳಿಗೆ ತಿಳಿಯದೆ ಹೋಗಿರುವುದರಿಂದ, ಹಿಂದೂಗಳಿಗೆ ದೈವಜ್ಞಾನ ತಿಳಿಯದೇ ಹೋಗಿದೆ. ದೈವಜ್ಞಾನ ತಿಳಿಯದವರನ್ನು ಕ್ರೈಸ್ತವ, ಮುಸ್ಲಿಮ್ ಮತದವರು ಯಾವುದೋ ಒಂದು ವಿಧವಾಗಿ ತಮ್ಮಕಡೆ ಸೆಳೆದುಕೊಳ್ಳುವುದಕ್ಕೆ ಪ್ರಯತ್ನಿಸಿ ಸ್ವಲ್ಪಮಟ್ಟಿಗೆ ವಿಜಯವನ್ನು ಸಾಧಿಸಿದ್ದಾರೆ. ಅದರಿಂದ ಹಿಂದೂಮತ ಕ್ಷೀಣದೆಸೆಗೆ ಬಂದಿದೆ. ಅಂತಹ ಸ್ಥಿತಿಯಲ್ಲಿ ಹಿಂದೂ ಮತದಲ್ಲಿನ ಶೂದ್ರರೆಲ್ಲರೂ ಇತರ ಮತದೊಳಗೆ ಹೋದರೆ ತಮ್ಮ ಕೆಳಗೆ

ಯಾರೂ ಇಲ್ಲದಂತೆ ಹೋಗುತ್ತಾರೆಂದು, ಹಾಗೆ ನಡೆದರೆ ತಮ್ಮ ಬದುಕುಬಾಳ್ವೆಗೆ ಮುಪ್ಪು ಏರ್ಪಡುತ್ತದೆಂದು, ತಮ್ಮ ಜೀವನೋಪಾಧಿ ಪೆಟ್ಟು ತಿನ್ನದಂತಿರುವುದಕ್ಕೆ ಇರುವವರನ್ನು ಇತರ ಮತಗಳೊಳಗೆ ಹೋಗದಂತೆ ಮಾಡಬೇಕೆಂದು, ಶೂದ್ರರು ಕೆಲವರನ್ನು ಗುಂಪು ಮಾಡಿ ಹಿಂದೂಮತ ರಕ್ಷಕರನ್ನಾಗಿ ಮಾಡಿ, ಅವರು ಹೇಳಿದಹಾಗೆ ಇತರ ಮತಗಳ ಮೇಲೆ ದಾಳಿಮಾಡುವಹಾಗೆ ತಯಾರಿ ಮಾಡಿಕೊಂಡಿದ್ದಾರೆ. ಯಾರಾದರೂ ತಮಗೆ ವಿರುದ್ಧ ಬೋಧನೆಯನ್ನು ಹೇಳಿದರೂ, ಭಗವದ್ಗೀತೆಯನ್ನು ಹೇಳಿದರೂ ಅವರಿಗೆ ಪರಮತ ಬೋಧಕರೆಂದು ಮುದ್ರೆಹಾಕಿ, ತಾವು ಏರ್ಪಾಟು ಮಾಡಿಟ್ಟುಕೊಂಡ ಮತರಕ್ಷಕರಿಂದ ದಾಳಿಗಳು ಸಹ ಮಾಡಿಸಿ ಅಡಗಿಸಿಹಾಕುತ್ತಿರುತ್ತಾರೆ. ಈ ವಿಧವಾಗಿರುವವರು ಇತರ ಮತಗಳೊಳಗೆ ಹೋಗದಂತಿರುವುದಕ್ಕೆ, ಹಿಂದೂ ಮತದಲ್ಲಿಯೇ ಯಾರೂ ತಮಗೆ ಎದುರು ಮಾತನಾಡದಂತೆ ಹಿಂದೂರಕ್ಷರನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಈ ವಿಧವಾಗಿ ಹಿಂದೂ ಮತದಲ್ಲಿ ಅಗ್ರಕುಲದವರ ದೊಡ್ಡಸ್ತಿಕೆ ಮೊದಲಿನಿಂದ ಚಲಾವಣೆ ಆಗುತ್ತಿದೆ. ಮೊದಲಿನಿಂದ ಹಿಂದೂಮತದಲ್ಲಿ ಕುಲವಿವಕ್ಷ ಇರುವುದರಿಂದ, ಹೆಚ್ಚಿನಶಾತ ಶೂದ್ರರು ಅಡಗಿಸಿಹಾಕಲ್ಪಟ್ಟು ದೈವ ಗ್ರಂಥ ಯಾವುದೋ, ದೈವ ಜ್ಞಾನ ಯಾವುದೋ ತಿಳಿಯದಹಾಗೆ ಇರುವುದರಿಂದ, ಹಿಂದೂ ಮತಕ್ಕೆ ನಾವೇ ಹಿರಿಯರು ಎಂದು ಹೇಳಿಕೊಳ್ಳುವ ಬ್ರಾಹ್ಮಣರು ಸಹ ವೇದಗಳನ್ನೇ ಆಶ್ರಯಿಸಿರುವುದರಿಂದ, ಹಿಂದೂಮತ ಕಲಿಯುಗದಲ್ಲಿ ಪೂರ್ತಿ ಅಜ್ಞಾನ ದೆಸೆಗೆ ಬಂದಿದೆ. ಅಜ್ಞಾನಿಗಳಾಗಿರುವ ಹಿಂದೂಗಳನ್ನು ಗುರುತಿಸಿದ ಇತರ ಮತದವರು ಅವರ ಜ್ಞಾನವನ್ನು ಹೇಳಿ ಕೆಲವರನ್ನು, ಉದ್ಯೋಗಗಳ ಆಸೆ ತೋರಿಸಿ ಕೆಲವರನ್ನು, ವೇದಗಳನ್ನು ಬೋಧಿಸಿ ಕೆಲವರನ್ನು, ಅನೇಕ ವಿಧಗಳಾಗಿ ಹಿಂದೂಗಳನ್ನು ತಮ್ಮ ಮತದೊಳಗೆ ಸೇರಿಸಿಕೊಳ್ಳುವುದು ನಡೆದಿದೆ. ಈ ವಿಧವಾಗಿ, ಕ್ಷೀಣದಸೆಯೊಳಗೆ ಬಂದಿರುವ ಹಿಂದೂಮತದಲ್ಲಿ ಈದಿನ ನಾವು ಭಗವದ್ಗೀತಾ ಜ್ಞಾನವನ್ನು ಹೇಳುತ್ತಾ ಪ್ರಜೆಗಳನ್ನು ಜ್ಞಾನವಂತರನ್ನಾಗಿ ಮಾರ್ಪಡಿಸುವುದಕ್ಕೆ ಎಷ್ಟೋ ಶ್ರಮಿಸುತ್ತಿದ್ದೇವೆ.

ನಾವು ಮಾಡುವ ಪ್ರಯತ್ನದಲ್ಲಿ ದೇವರ ಜ್ಞಾನಕ್ಕೆ ಬೆಲೆ ಕೊಡುತ್ತಿದ್ದೇವೆ ಹೊರತು, ಮತ ಸಂಪ್ರದಾಯಗಳಿಗೆ ಬೆಲೆಕೊಡುತ್ತಿಲ್ಲ. ಈದಿನ ಮೂರು ಗ್ರಂಥಗಳಲ್ಲಿಯೂ ದೈವಜ್ಞಾನವೇ ಇರುವುದರಿಂದ, ಮೂರು ಮತ ಗ್ರಂಥಗಳಾಗಿ ಹೇಳಲ್ಪಡುತ್ತಿರುವ ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳ ಜ್ಞಾನ ಒಂದೇ ಆಗಿರುವುದರಿಂದ, ನಾನು ಓದಿದ ಭಗವದ್ಗೀತೆ ವೊಂದರ ಜ್ಞಾನಮೂಲಗಳು ಉಳಿದ ಎರಡು ಗ್ರಂಥಗಳಲ್ಲಿ ಇರುವುದರಿಂದ, ನಾನು ಮೂರು ಮತದವರಿಗೂ ಸಮಾನವಾದ ದೈವಜ್ಞಾನವನ್ನು ತಿಳಿಸುತ್ತಿದ್ದೇನೆ. ನನಗೆ ಮೂರು ದೈವ ಗ್ರಂಥಗಳು ಸಮಾನವಾಗಿರುವುದರಿಂದ, ಮೂರು ಮತಗಳ ಜ್ಞಾನ ಸಂಪೂರ್ಣವಾಗಿ ತಿಳಿದುಹೋಗಿದೆ. ಹಾಗೆ ಮೂರು ದೈವ ಗ್ರಂಥಗಳ ಜ್ಞಾನ ತಿಳಿಯುವುದರಿಂದ ಅವುಗಳಲ್ಲಿನ ಕಾಲುಷಿತ ಎಲ್ಲಿದ್ದರೂ ತಿಳಿದುಹೋಗುತ್ತಿದೆ. ದೈವ ಗ್ರಂಥಗಳಾದ, ಮೂರು ಮತ ಗ್ರಂಥಗಳಾಗಿರುವ ಭಗವದ್ಗೀತೆ, ಬೈಬಲ್, ಖುರ್‌ಆನ್‌ನಲ್ಲಿನ ಜ್ಞಾನಕ್ಕೆ ಆ ಮತಸ್ಥರು ತಪ್ಪಾಗಿ ಅರ್ಥೈಸಿಕೊಂಡು ಮತದ್ವೇಷದಿಂದ ತಮ್ಮ ಮತಗ್ರಂಥವನ್ನು ದೊಡ್ಡದುಮಾಡಿ, ಉಳಿದ ಎರಡು ಗ್ರಂಥಗಳನ್ನು ಕಡಿಮೆ ಮಾಡಿದಾಗ, ನಾವು ಜೋಕ್ಯ ಮಾಡಿಕೊಂಡು ಮೂರು ಗ್ರಂಥಗಳು ಒಂದೇ ದೇವರು ಕೊಟ್ಟಿರುವವೇ ಎಂದು, ಆ ಮೂರು ಗ್ರಂಥಗಳು ಒಂದೇ ದೇವರನ್ನು ತಿಳಿಸುತ್ತಿವೆಯೆಂದು, ತಿಳಿಯದೆ ಯಾವ ಮತಸ್ಥನು ಸಹ ಇತರ ಮತ ಗ್ರಂಥಗಳನ್ನು ಕುರಿತು ಕಡಿಮೆಯಾಗಿ ಮಾತನಾಡ ಬಾರದೆಂದು ಹೇಳುತ್ತಿದ್ದೇವೆ. ಮೂರು ಮತಗಳಲ್ಲಿ ಸಮಾನ ಭಾವವಿರುವ ನಮ್ಮನ್ನು ಕ್ರೈಸ್ತವರು, ಮುಸ್ಲಿಮ್‌ರು ಅರ್ಥ ಮಾಡಿಕೊಂಡು ನಮ್ಮನ್ನು ಗೌರವಭಾವದಿಂದಲೇ ನೋಡುತ್ತಿದ್ದಾರೆ. ಆದರೆ ಸ್ವಮತವಾದ ಹಿಂದೂಮತದಲ್ಲಿಯೇ ನಮಗೆ ಉಳಿದ ಮತಗಳಲ್ಲಿ ಲಭಿಸಿದ ಗೌರವ ಲಭಿಸಲಿಲ್ಲವೆಂದು ಅಂದುಕೊಳ್ಳುತ್ತೇವೆ. ಅದಕ್ಕೆ ಮುಖ್ಯಕಾರಣ ನಾನು ಬ್ರಾಹ್ಮಣನು ಅಲ್ಲವಾದ್ದರಿಂದ ಅವರ ಪ್ರೇರಣೆಯಿಂದ, ಅವರ ಕಣ್ಣುಸನ್ನೆಗಳಿಂದ ಚಲಾವಣೆ ಆಗುತ್ತಿರುವ ಮತ ಸಂಘದವರಿಗೆ ಜ್ಞಾನವೆಂದರೆ ಏನೋ ತಿಳಿಯದೆ ಹೋಗಿರುವುದರಿಂದ, ಅವರೆಲ್ಲರೂ ನನ್ನನ್ನು ಹಿಂದೂಗಳಿಗೆ ಕೆಟ್ಟದ್ದು ಮಾಡುವ ವನಾಗಿಯೇ ಲೆಕ್ಕಿಸುತ್ತಿದ್ದಾರೆ. ಮೊದಲು ಪೂರ್ತಿ ವಿರುದ್ಧವಾಗಿರುವವರು ಸಹ

ಸ್ವಲ್ಪ ಯೋಚಿಸಿ, ನಾವು ಮಾಡುತ್ತಿರುವುದು ಒಳ್ಳೆಯ ಕೆಲಸವೇ ಎಂದು ತಿಳಿದು ಸ್ವಲ್ಪ ಸ್ವಲ್ಪವಾಗಿ ಹತ್ತಿರಕ್ಕೆ ಬಂದಿದ್ದಾರೆ.

ಮೂರು ದೈವಗ್ರಂಥಗಳಲ್ಲಿ ಒಂದೇ ದೈವಜ್ಞಾನ ಇರುವಾಗ, ಮೂರು ಮತಗಳಲ್ಲಿ ಯಾವ ಮತದಲ್ಲಿದ್ದರೂ, ಆ ಮತಕ್ಕೆ ಒಂದು ಗ್ರಂಥ ಇರುವಾಗ ಅದರ ಮೂಲಕ ಪ್ರತಿ ಮತಸ್ಥನು ದೇವರ ಜ್ಞಾನ ತಿಳಿದುಕೊಳ್ಳುವುದಕ್ಕೆ ಅವಕಾಶ ಇರುವಾಗ, ಒಂದು ಮತದಲ್ಲಿ ಇಲ್ಲದಿರುವುದು ಮತ್ತೊಂದು ಮತದಲ್ಲಿ ಇದೆಯೆಂದು, ಒಂದು ಮತವನ್ನು ಬಿಟ್ಟು ಮತ್ತೊಂದು ಮತದೊಳಗೆ ಹೋಗುವುದು ನನಗೆ ಎಷ್ಟುಮಾತ್ರ ಸರಿಹೋಗುವುದಿಲ್ಲ. ಒಂದು ಮತವನ್ನು ಬಿಟ್ಟು ಮತ್ತೊಂದು ಮತದೊಳಗೆ ಹೋದರೆ ಬಿಟ್ಟುಹೋದ ಮತವೊಂದರ ಗ್ರಂಥವನ್ನು ಕೀಳಾಗಿನೋಡಿದಂತಾಗುತ್ತದೆ. ಆದ ಕಾರಣ ಮತಾಂತರಿಸುವುದು ಅಂದರೆ ನನಗೆ ಸರಿಹೋಗುವುದಿಲ್ಲ. ಮತಾಂತರಗಳನ್ನು ಪ್ರೋತ್ಸಹಿಸುವವರನ್ನು ನೋಡಿದರೆ ನನಗೆ ಪರಮ ಅಸಹ್ಯ. ಒಂದು ಮತದಲ್ಲಿದ್ದು ಮತ್ತೊಂದು ಮತದಲ್ಲಿನ ಜ್ಞಾನವನ್ನು ತಿಳಿದುಕೊಳ್ಳಬಹುದಾಗಲಿ, ಮತವನ್ನು ಬದಲಾಯಿ ಸಬಾರದೆಂದು ಹೇಳುತ್ತಿದ್ದೇವೆ. ಒಬ್ಬ ಹಿಂದೂಮತಸ್ಥನು ತನ್ನ ಮತ ಗ್ರಂಥ ವಾಗಿರುವ ಭಗವದ್ಗೀತೆಯನ್ನು ಕುರಿತು ತಿಳಿದುಕೊಳ್ಳಬಹುದು. ಹಾಗೆಯೇ ಇತರ ಮತ ಗ್ರಂಥಗಳಲ್ಲಿನ ಜ್ಞಾನವನ್ನು ಸಹ ತಿಳಿಯಬಹುದು. ಹಾಗೆ ಇತರ ಮತ ಗ್ರಂಥಗಳನ್ನು ಓದುವುದಾಗಲಿ, ಅವುಗಳಲ್ಲಿನ ಜ್ಞಾನವನ್ನು ತಿಳಿದು ಕೊಳ್ಳುವುದಾಗಲಿ ಮಾಡುವುದರಲ್ಲಿ ತಪ್ಪಿಲ್ಲ. ಹಾಗಲ್ಲದೆ ಉಳಿದ ಗ್ರಂಥಗಳಲ್ಲಿ ಇಲ್ಲದಿರುವುದು ನಮ್ಮ ಗ್ರಂಥಗಳಲ್ಲಿಯೇ ಇದೆಯೆಂದು ಹೇಳುವುದಾಗಲಿ, ಉಳಿದ ಮತಗಳಲ್ಲಿ ಇಲ್ಲದಿರುವುದು ನಮ್ಮ ಮತದಲ್ಲಿಯೇ ಇದೆಯೆಂದು ಹೇಳುವುದಾಗಲಿ ನನಗೆ ಸರಿಹೋಗುವುದಿಲ್ಲ. ಆದರೆ ಈದಿನ ಪ್ರತಿ ಮತಸ್ಥನು ತನ್ನ ಮತವನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಾ, ಇತರ ಮತಗಳನ್ನು ಕಡಿಮೆ ಮಾಡಿ ಹೇಳುವುದು ನಡೆಯುತ್ತಿದೆ. ಹಾಗೆ ಹೇಳುವವರ ಮಾತುಗಳನ್ನಾಗಲಿ, ಅಂಥವರು ಬರೆಯುವ ಬರಹಗಳಾಗಲಿ, ಖಂಡಿಸುತ್ತಾ ಇದು ತಪ್ಪು ಎಂದು ಹೇಳುತ್ತಿರುತ್ತೇನೆ. ಇಲ್ಲಿಯ ವರೆಗು ಈ ಗ್ರಂಥದಲ್ಲಿ ಮಾಡಿದ ಕೆಲಸ ಅದೇಯೆಂದು ಹೇಳುತ್ತಿದ್ದೇನೆ.

ಮನುಷ್ಯ ಹುಟ್ಟಿದ ನಂತರ ಮುಖ್ಯವಾಗಿ ತಿಳಿಯಬೇಕಾಗಿರುವುದು ದೇವರ ಜ್ಞಾನವೇ ಹೊರತು, ಬೇರೆಯಲ್ಲ. ಆದರೆ ಮನುಷ್ಯ ದೇವರ ಜ್ಞಾನವನ್ನು ಪಕ್ಕಕ್ಕಿಟ್ಟು ತಾನು ಸ್ವತಃವಾಗಿ ತಯಾರು ಮಾಡಿಕೊಂಡ ಮತವೆಂಬ ಮಾಯೆಯಲ್ಲಿ ಸಿಲುಕಿಕೊಂಡಿದ್ದಾನೆ. ಹಾಗೆ ಮತ ಮಾಯೆಯಲ್ಲಿ ಬಿದ್ದವನಿಗೆ ಅದೇ ಒಳ್ಳೆಯದಾಗಿ ಕಾಣಿಸುತ್ತಿರುತ್ತದೆ ಹೊರತು, ಮತದಲ್ಲಿನ ಜ್ಞಾನ ಒಳ್ಳೆಯದಾಗಿ ಕಾಣಿಸುವುದಿಲ್ಲ. ಈ ದಿನ ಬೋಧಕರಾಗಿರುವ ಪ್ರತಿಯೊಬ್ಬರೂ ಮತವೊಂದರ ಮಾಯೆಯಲ್ಲಿ ಬಿದ್ದುಹೋಗಿದ್ದಾರೆ. ಆದ್ದರಿಂದ ಅವರು ಬೋಧಕರಾದರೂ, ಮತವನ್ನೇ ಬೋಧಿಸುತ್ತಾ, ಮತವನ್ನು ಕುರಿತೇ ಹೇಳುತ್ತಿರುತ್ತಾರೆ. ಮತ ಗ್ರಂಥಗಳಲ್ಲಿನ ಜ್ಞಾನವನ್ನು ಮಾತ್ರ ಸ್ವಲ್ಪವಾದರೂ ತಿಳಿಯದಂತಿದ್ದಾರೆ. ಕ್ರೈಸ್ತವರನ್ನು ಪರಿಶೀಲಿಸಿ ನೋಡಿದರೆ ಬೋಧಕರೆಲ್ಲರೂ ಮತವ್ಯಾಪ್ತಿಯಲ್ಲಿ ಮುಳುಗಿಹೋಗಿದ್ದಾರಾಗಲಿ, ಬೈಬಲ್‌ನಲ್ಲಿ ಯೇಸು ಹೇಳಿದ ಜ್ಞಾನವನ್ನು ನಾವು ಸರಿಯಾಗಿ ಅರ್ಥಮಾಡಿ ಕೊಂಡಿದ್ದೇವಾ ಇಲ್ಲವಾ ಎಂದು ಹಿಂತಿರುಗಿ ನೋಡಿಕೊಳ್ಳಲಾರದೆ ಇದ್ದಾರೆ. ಹಾಗೆಯೇ ಮುಸ್ಲಿಮ್‌ರು ಸಹ ಅಲ್ಲಲ್ಲಿ ಕೆಲವು ಸಂಘಗಳನ್ನು ಏರ್ಪಡಿಸಿಕೊಂಡು, ಮತವ್ಯಾಪ್ತಿ ಮಾಡಬೇಕೆಂದು ಪ್ರಯತ್ನಿಸುತ್ತಿದ್ದಾರೆ ಹೊರತು, ತಮ್ಮ ಗ್ರಂಥವಾದ ಖುರ್‌ಆನ್‌ಲ್ಲಿನ ಜ್ಞಾನ ಅವರಿಗೆ ಎಷ್ಟರಮಟ್ಟಿಗೆ ಅರ್ಥವಾಗಿದೆಯೆಂದು ಸ್ವಲ್ಪವೂ ಸಹ ನೋಡಿಕೊಳ್ಳದೆ ಹೋಗುತ್ತಿದ್ದಾರೆ. ಇನ್ನು ಹಿಂದೂಗಳ ವಿಷಯಕ್ಕೆ ಬಂದರೆ ಮತವ್ಯಾಪ್ತಿ ಮಾಡಬೇಕೆಂದು ಪ್ರಯತ್ನ ಯಾವ ಬೋಧಕನೂ ಮಾಡುತ್ತಿಲ್ಲ ಆದರೆ, ದೇವರನ್ನು ಅಡ್ಡ ಇಟ್ಟುಕೊಂಡು ಧನಾರ್ಜನೆ ಮಾಡಬೇಕೆಂದು ನೋಡುತ್ತಿದ್ದಾರೆ. ಇಂದೂಮತದಲ್ಲಿನ ಬೋಧಕರು, ಗುರುಗಳು, ಸ್ವಾಮಿಗಳಾಗಿ ಹೆಸರುವಾಸಿಯಾಗಿದ್ದು ದೃಷ್ಠಿಯೆಲ್ಲವೂ ಧನಾರ್ಜನೆ ಮೇಲೆ ಇಟ್ಟುಕೊಂಡು, ಬೋಧಕರಲ್ಲದಿರುವವರು, ಸ್ವಲ್ಪವೂ ಜ್ಞಾನ ತಿಳಿಯದವರು ಸಂಘಗಳಾಗಿ ಏರ್ಪಟ್ಟು ಸ್ವಮತ ರಕ್ಷಣೆಯಲ್ಲಿ ಬಿದ್ದುಹೋಗಿದ್ದಾರೆ. ಆದ್ದರಿಂದ ಧನಾರ್ಜನೆಯಲ್ಲಿರುವ ಬೋಧಕರಿಗಾಗಲಿ, ಸ್ವಮತ ರಕ್ಷಣೆಯಲ್ಲಿರುವ ಮತ ರಕ್ಷಕರಿಗಾಗಲಿ, ಭಗವದ್ಗೀತೆಯಲ್ಲಿನ ಜ್ಞಾನ ತಿಳಿಯದಂತೆ ಹೋಗಿದೆ.

ಈದಿನ ಸ್ವಮತ ರಕ್ಷಣೆಯಲ್ಲಿ ಬಿದ್ದುಹೋದ ಹಿಂದೂಗಳು ಇರುವ ಈ ದೇಶ, ಒಂದುಕಾಲದಲ್ಲಿ ಪ್ರಪಂಚಕ್ಕೆಲ್ಲಾ ಜ್ಞಾನ ತಿಳಿಸುವುದಾಗಿದ್ದು, ಪ್ರಪಂಚ ದೇಶಗಳಲ್ಲಿ ಜ್ಞಾನಿಗಳ ದೇಶವೆಂದು ಹೆಸರುವಾಸಿಯಾಗಿತ್ತು. ಸೃಷ್ಠ್ಯಾದಿಯಲ್ಲಿ ದೇವರು ತನ್ನ ಜ್ಞಾನವನ್ನು ಆಕಾಶದಲ್ಲಿನ ಆತ್ಮದ ಮೂಲಕ ಹೇಳಿಸಿದ್ದಾನೆ. ಆಕಾಶ ಹೇಳಿದ ಜ್ಞಾನವನ್ನು ಸೂರ್ಯನು ಕೇಳುವುದು ನಡೆದಿದೆ. ಸೂರ್ಯನು ಕೇಳಿದ ಜ್ಞಾನವನ್ನು ಭೂಮಂಡಲದಲ್ಲಿನ ಮಾನವರಿಗೆ ಸೂರ್ಯನು ತಿಳಿಸುವುದು ನಡೆದಿದೆ. ಹಾಗೆ ತಿಳಿಸಿದಾಗ ಭೂಮಿಮೇಲಿರುವ ಭಾರತದೇಶದಲ್ಲಿ ಪೂರ್ತಿ ದಕ್ಷಿಣ ಭಾರತದೇಶದಲ್ಲಿ, ಶ್ರೀಲಂಕಗೆ ಸಮೀಪದಲ್ಲಿರುವ ರಾಮೇಶ್ವರಂ ಪ್ರಾಂತದಲ್ಲಿರುವ ಮನುವು ಎಂಬ ವ್ಯಕ್ತಿಗೆ ತಿಳಿಸುವುದು ನಡೆದಿದೆ. ಮನುವು ತಿಳಿದುಕೊಂಡ ಜ್ಞಾನವನ್ನು ಇಕ್ಷ್ವಾಕನೆಂಬ ರಾಜನಿಗೆ ತಿಳಿಸಿದಾಗ, ಆ ರಾಜನ ಮೂಲಕ ಪೂರ್ತಿ ಭಾರತದೇಶವೆಲ್ಲಾ ವ್ಯಾಪಿಸಿಹೋಗಿದೆ. ಹಾಗೆ ಭಾರತದೇಶದಲ್ಲಿ ಎಲ್ಲರೂ ದೈವಜ್ಞಾನ ಇರುವವರಾಗಿದ್ದಾರೆ. ಪ್ರಪಂಚ ದೇಶಗಳಲ್ಲಿ ಯಾವ ದೇಶದಲ್ಲಿ ಇಲ್ಲದ ದೈವಜ್ಞಾನ ಭಾರತದೇಶದಲ್ಲಿ ಇರುತ್ತಿತ್ತು. ಅದ ಕಾರಣ ಕೃತಯುಗದಲ್ಲಿಯೇ ಭಾರತದೇಶ ಜ್ಞಾನಿಗಳ ದೇಶವೆಂದು ಹೆಸರುವಾಸಿಯಾಗಿದೆ. ಪ್ರಪಂಚದಲ್ಲಿ ಯಾವ ದೇಶಕ್ಕೂ ಬಾರದ ಬಿರುದು ಭಾರತದೇಶಕ್ಕೆ ಬಂದಿದೆ. ದೇವರ ಜ್ಞಾನ, ದೈವಶಕ್ತಿ ಭಾರತದೇಶದಲ್ಲಿಯೇ ಇರುವುದರಿಂದ, ಆ ಕಾಲದಲ್ಲಿಯೇ ಭಾರತದೇಶವನ್ನು ಇಂದೂದೇಶ ಎನ್ನುತ್ತಿದ್ದರು. 'ಇಂದೂ' ಎನ್ನುವುದು ಪ್ರತ್ಯೇಕ ಪದ. 'ಇಂದೂ' ಎಂದರೆ ಚಂದ್ರನೆಂದು ಅರ್ಥ. ದೈವಜ್ಞಾನಕ್ಕೆ ಚಂದ್ರನು ಚಿಹ್ನೆಯಾಗಿದ್ದಾನೆ. ಜ್ಯೋತಿಷ್ಯ ಶಾಸ್ತ್ರದಲ್ಲಿ ಸಹ ಚಂದ್ರನನ್ನನುಸರಿಸಿ ಮನುಷ್ಯನಿಗೆ ಯಾವ ಜ್ಞಾನವಿದೆಯೋ, ಎಷ್ಟು ಜ್ಞಾನವಿದೆಯೋ ಹೇಳಬಹುದು.

ಆಧ್ಯಾತ್ಮಿಕ ವಿದ್ಯೆಯ ಪ್ರಸ್ತಾವನೆ ಬಂದಕಡೆ ಜ್ಞಾನಕ್ಕೆ ಗುರುತಾಗಿ ಚಂದ್ರನನ್ನು ಹೇಳುವುದು ನಡೆಯುತ್ತಿತ್ತು. ಭಗವದ್ಗೀತೆಯಲ್ಲಿ ಸಹ ಅಕ್ಷರ ಪರಬ್ರಹ್ಮಯೋಗದಲ್ಲಿ 25ನೇ ಶ್ಲೋಕದಲ್ಲಿ ಯೋಗಿ ಆದವನು ಸ್ವಲ್ಪಮಟ್ಟಿನ ಕರ್ಮಶೇಷದಿಂದ ಪುನಃ ಹುಟ್ಟಬೇಕಾಗಿಬಂದರೆ "ಚಾಂದ್ರಮಸಂ ಜ್ಯೋತಿರ್ಯೋಗಿ

ಪ್ರಾಪ್ಯ ನಿವರ್ತತೆ" ಎಂದು ಶ್ಲೋಕದಲ್ಲಿ ಹೇಳಿದ್ದಾರೆ. ಅದರಭಾವದ ಪ್ರಕಾರ ಪುನಃ ಜನ್ಮಿಸುವ ಯೋಗಿ ಚಂದ್ರತೇಜವನ್ನು ಹೊಂದಿ ಜನ್ಮವನ್ನು ಹೊಂದುತ್ತಾನೆಂದು ಇದೆ. ಇಲ್ಲಿ ಚಂದ್ರತೇಜ ಎಂದರೆ ಸಂಪೂರ್ಣಜ್ಞಾನ ಹೊಂದಿ ಎಂದು ಅರ್ಥ. ಈ ವಿಧವಾಗಿ ಭಾರತದೇಶವೆಲ್ಲಾ ಜ್ಞಾನದಿಂದ ಪ್ರಕಾಶಿಸುತ್ತಿತ್ತು. ಆದ್ದರಿಂದ ಜ್ಞಾನಕ್ಕೆ ಗುರುತಾಗಿರುವ ಚಂದ್ರನನ್ನು ಆಧಾರ ಮಾಡಿಕೊಂಡು ಭಾರತದೇಶವನ್ನು ಇಂದೂ ದೇಶ ಎನ್ನುತ್ತಿದ್ದರು. ಮೊದಲ ಹೆಸರು ಭಾರತದೇಶವಾದರೂ ಭಾರತದೇಶ ಇಂದೂದೇಶ ಎಂದು (ಜ್ಞಾನಿಗಳ ದೇಶವೆಂದು) ಇತರ ದೇಶಗಳಿಂದ ಪ್ರಶಂಸಿಸಲ್ಪಡುತ್ತಿತ್ತು. ಇಂದೂದೇಶ ಎಂದು ಭಾರತದೇಶವನ್ನು, ಇಂದೂಗಳು ಎಂದು ಭಾರತದೇಶದಲ್ಲಿ ನಿವಾಸಿಸುವವರನ್ನು ಮೂರು ಯುಗಗಳಲ್ಲಿ ಕರೆಯುತ್ತಿದ್ದರು. ನಾಲ್ಕನೇ ಯುಗವಾದ ಕಲಿಯುಗದಲ್ಲಿ ಮೂರುಸಾವಿರ ವರ್ಷಗಳು ಕಳೆಯುವವರೆಗು ಹಾಗೆಯೆ, ಪ್ರಜೆಗಳನ್ನು ಇಂದೂಗಳೆಂದು, ದೇಶವನ್ನು ಇಂದೂದೇಶವೆಂದು ಕರೆಯುತ್ತಿದ್ದರು. ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಕ್ರೈಸ್ತವ ಮತ ತಯಾರಾದ ನಂತರ, ಅಲ್ಲಿಯವರೆಗು ಇಂದೂಗಳೆಂದು ಕರೆಯಲ್ಪಡುತ್ತಿರುವ ಪ್ರಜೆಗಳ ಪಕ್ಕಕ್ಕೆ, ಮತ ಎನ್ನುವ ಪದವನ್ನು ಸೇರಿಸಲ್ಪಟ್ಟಿದೆ. ಅಲ್ಲಿಯವರೆಗು ಮತ ಎನ್ನುವ ಪ್ರಸ್ತಾವನೆಯೆ ಇಲ್ಲದೇ, ಆ ಹೆಸರೇ ತಿಳಿಯದಂತಿದ್ದ ಇಂದೂಗಳು, ಅವರು ಕ್ರೈಸ್ತವ ಮತಸ್ಥರಾದರೆ ನಾವು ಇಂದೂ ಮತಸ್ಥರೆಂದು ಹೇಳುವುದು ಪ್ರಾರಂಭಿಸಿದ್ದಾರೆ. ಆ ವಿಧವಾಗಿ ಮೊಟ್ಟಮೊದಲು ಮತ ಎನ್ನುವ ಪದ ಇಂದೂಗಳ ಪಕ್ಕದಲ್ಲಿ ಸೇರಿಹೋಗಿದೆ.

ನಂತರ ಸ್ವಲ್ಪಕಾಲಕ್ಕೆ ಬ್ರಿಟೀಷರು ಭಾರತ ದೇಶಕ್ಕೆ ವ್ಯಾಪಾರಕ್ಕೋಸ್ಕರ ಬಂದಾಗ, ಅವರಿಗೆ ಕೆಲವು ಪದಗಳನ್ನು ಮಾತನಾಡುವುದು ಕಷ್ಟವಾದ್ದರಿಂದ, ಅವರ ನಾಲಿಗೆ ಸುಲಭವಾಗಿ ಹೇಳುವ ಹಾಗೆ ಕೆಲವು ಹೆಸರುಗಳನ್ನು ಬದಲಾಯಿಸಿಕೊಂಡಿದ್ದಾರೆ. ಹಾಗೆ ಅವರು ಬದಲಾಯಿಸಿಕೊಳ್ಳುವುದರಿಂದ ಕೆಲವು ಪದಗಳು ಬ್ರಿಟಿಷ್‌ರು ಬಂದ ನಂತರ ಬದಲಾಗಿವೆಯೆಂದು ಹೇಳಬಹುದು. ಮುಂಬಾಯಿ ಎನ್ನುವ ಪದವನ್ನು ಬೊಂಬಾಯಿ ಎಂದು ಬದಲಾಯಿಸಿ

ಕೊಂಡಹಾಗೆ, ಇಂದೂ ಎನ್ನುವ ಪದವನ್ನು ಹಿಂದೂ ಎಂದು ಹೇಳುವುದು ಪ್ರಾರಂಭ ಮಾಡಿದರು. ಇಂದೂ ಎನ್ನುವ ಪದವನ್ನು ಮೊದಲು ಹಿಂದೂವಾಗಿ ಕರೆದವರು ಆಂಗ್ಲೇಯರೆಂದು ಈ ದಿನ ಎಲ್ಲರಿಗೂ ತಿಳಿಯದ ಹಾಗೆ ಹೋಗಿದೆ. ಚೆನ್ನಪಟ್ನವನ್ನು ಮದ್ರಾಸ್ ಎನ್ನುವ ಹೆಸರಾಗಿ ಆಂಗ್ಲೆಯರೇ ಮಾರ್ಪಡಿಸಿದ್ದಾರೆ. ಅವರು ಬಾಯಿ ತಿರುಗುವುದಕ್ಕೆ, ಸುಲಭವಾಗಿ ಹೇಳುವುದಕ್ಕೆ ಅನಂತಪುರಂ ಎನ್ನುವ ಹೆಸರನ್ನು ಅನಂತಪೂರ್ ಎಂದು ಕರೆಯುತ್ತಿದ್ದರು. ಪುರಂ ಎಂದು ಇರುವ ಹೆಸರನ್ನು ಪೂರ್ ಎಂದು ಬದಲಾಯಿಸಿದವರು, ಕಡಪವನ್ನು ಕುಡಪ (cuddapah) ಎಂದು ಆಂಗ್ಲದಲ್ಲಿ ಬರೆದುಕೊಂಡಿದ್ದಾರೆ. ಹೀಗೆ ಎಷ್ಟೋ ಹೆಸರುಗಳೊಂದರ ರೂಪುರೇಖೆಗಳನ್ನು ಇಂಗ್ಲೀಷ್‌ರು ಬದಲಿಸಿದ ಸಂಗತಿ ಕೆಲವರಿಗೆ ಗುರುತು ಇರುವುದರಿಂದ, ಈದಿನ ಕೆಲವು ಹೆಸರುಗಳನ್ನು ಮತ್ತೆ ಯಥಾತಥವಾಗಿ ಹೇಳಿಕೊಳ್ಳುವುದು, ಬರೆದುಕೊಳ್ಳುವುದು ನಡೆಯುತ್ತಿದೆ. ಉದಾಹರಣೆಗೆ ಬೊಂಬಾಯಾಗಿರುವ ಹೆಸರನ್ನು ಮುಂಬಾಯಾಗಿ, ಮದ್ರಾಸ್ ಅನ್ನು ಚೆನ್ನೈಯಾಗಿ, ಪೂರ್ ಅನ್ನುವುದನ್ನು ಪುರವಾಗಿ ಈ ಮಧ್ಯ 15 ವರ್ಷಗಳಿಂದ ಬದಲಾಯಿಸಿಕೊಂಡಿದ್ದೇವೆ.

ಆದರೆ ಇಂದೂ ಎನ್ನುವ ಪದ ಹಿಂದೂವಾಗಿ ಬದಲಾಗಿದೆಯೆಂದು ಮರೆತುಹೋಗಿ, ಮಧ್ಯದಲ್ಲಿ ಬಂದಿರುವ ಹಿಂದೂಪದವನ್ನೇ ಈದಿನ ಸಹ ಹೇಳಿಕೊಳ್ಳುತ್ತಿದ್ದೇವೆ. ಆದರೆ ಹಿಂದೂ ಎನ್ನುವ ಪದ ಅರ್ಥ ಇಲ್ಲದಿರುವುದೆಂದು, ಪೂರ್ವದಲ್ಲಿ ನಾವು ಇಂದೂಗಳೆಂದು, ನಮ್ಮ ದೇಶ ಇಂದೂ ದೇಶವೆಂದು ಕರೆಯಲ್ಪಟ್ಟಿದೆ ಎಂದು, ನಾವು ಕಳೆದ ಮೂವತ್ತು ವರ್ಷಗಳಿಂದ ಹೇಳುತ್ತಲೇ ಬರುತ್ತಿದ್ದರೂ, ನಮ್ಮ ಮಾತನ್ನು ಕೇಳುತ್ತಿಲ್ಲ. ಜ್ಞಾನಕ್ಕೆ ನಿಲಯವಾದ ದೇಶವೆಂದು ಆದಿನ ಇತರ ದೇಶಸ್ಥರೆಲ್ಲರೂ ಭಾರತದೇಶವನ್ನು ಇಂದೂದೇಶವೆಂದು ಎಷ್ಟೋ ಗೌರವದಿಂದ ಕರೆದಿದ್ದರೆ, ಈದಿನ ತಮ್ಮ ಚರಿತ್ರೆಯನ್ನು ತಾವೇ ಮರೆತು ಹೋದವರಾಗಿ ಭಾರತೀಯರು ಈದಿನ ಹಿಂದೂಗಳಾಗಿ ಕರೆಯಲ್ಪಡುತ್ತಿದ್ದಾರೆ.

ಬೊಂಬಾಯಿಯನ್ನು ಮುಂಬಾಯಾಗಿ ಮದ್ರಾಸನ್ನು ಚೆನ್ನೈಯಾಗಿ ಮಾರ್ಪಡಿಸಿಕೊಂಡವರು, ತಮ್ಮ ಚರಿತ್ರೆಯನ್ನೇ ಬದಲಾಯಿಸಿದ ಹಿಂದೂ ಪದವನ್ನು ಪುನಃ ಇಂದೂ ಪದವಾಗಿ ಬದಲಾಯಿಸಿಕೊಳ್ಳಲಾರದೆ ಹೋಗಿದ್ದಾರೆ. ತಾವು ಗತದಲ್ಲಿ ಇಂದೂಗಳು ಎನ್ನುವ ಮಾತನ್ನು ಪೂರ್ತಿಯಾಗಿ ಮರೆತುಹೋಗಿದ್ದಾರೆ.

ದೇವರ ಧರ್ಮಗಳು ಜ್ಞಾನರೂಪದಲ್ಲಿ ಮೊಟ್ಟಮೊದಲು ಭಾರತ ದೇಶದಲ್ಲಿ ಪ್ರವೇಶಿಸಿ ನಂತರ ಸುತ್ತಮುತ್ತಲು ಹರಡಿದ ಚರಿತ್ರೆಯನ್ನು ಅನುಸರಿಸಿ ಇಂದಿಗೂ ಭಾರತದೇಶ ಇಂದೂದೇಶವೇ, ಪೂರ್ವದಲ್ಲಿ ಜ್ಞಾನದ ಪ್ರಕಾರ ಚಂದ್ರನ ಗುರುತಾಗಿ ಇಂದೂ ಎಂದು ಕರೆಯಲ್ಪಟ್ಟ ಪ್ರಜೆಗಳು ಎಷ್ಟೋಕಾಲ ಜ್ಞಾನಿಗಳಾಗಿಯೇ ಜೀವನ ಸಾಗಿಸಿದ್ದಾರೆ. ಭಾರತದೇಶ ಇಂದೂದೇಶವಾಗಿ ಕರೆಯಲ್ಪಡುವುದರಿಂದ ಆ ಹೆಸರು ಶಾಶ್ವತವಾಗಿ ಇರುವಹಾಗೆ ಭೌಗೋಳಿಕವಾಗಿ ಕಾಶಿ ಮೊದಲಾದ ನಗರಗಳು ಅರ್ಧಚಂದ್ರನ ಆಕೃತಿಯಲ್ಲಿ ನಿರ್ಮಿಸಲ್ಪಟ್ಟಿವೆ. ಅಲಹಾಬಾದ್‌ನಲ್ಲಿ ಗಂಗಾನದಿ ಅದ್ಭುತವಾಗಿ ಚಂದ್ರಾಕಾರದಲ್ಲಿ ಕ್ರಾಸ್ ತಿರುಗಿದೆ. ಅಷ್ಟೇ ಅಲ್ಲದೆ ಈದಿನ ನಾವು ಕರೆಯುತ್ತಿರುವ ಹಿಂದೂ ಮಹಾಸಮುದ್ರವನ್ನು ಪೂರ್ವದಲ್ಲಿ "ಇಂದೂ ಸರೋವರವೆಂದು" ಕರೆಯುತ್ತಿದ್ದರು. ಭಾರತದೇಶದ ಮೊದಲ ಪ್ರಧಾನಿಯಾಗಿದ್ದ ನೆಹರೂ ತನ್ನ ಮಗಳಿಗೆ ಇಂದಿರ ಪ್ರಿಯದರ್ಶಿನಿ ಎಂದು ಹೆಸರು ಇಟ್ಟು, ಮುದ್ದಾಗಿ ಇಂದೂ ಎಂದು ಕರೆಯುತ್ತಿದ್ದನು. ನಾವು ಜ್ಞಾನದ ಪ್ರಕಾರ ಕೃತಯುಗದಿಂದ ಭಾರತದೇಶ ಇಂದೂ ದೇಶವಾಗಿ, ಜ್ಞಾನಕ್ಕೆ ಚಿಹ್ನೆಯಾದ ಚಂದ್ರನ ಹೆಸರಿನಿಂದ ಇಂದೂ ಎಂದು ಕರೆಯಲ್ಪಡುತ್ತಿದೆಂದು ಹೇಳುತ್ತಿದ್ದೇವೆ. ಈ ದೇಶ ಇಂದೂ ದೇಶವೆಂದು ಹೇಳುವುದಕ್ಕೆ ಬಲವಾದ ಆಧಾರ ಸಹ ಇದೆ. ಅದೇನೆಂದರೆ! ಇಂದಿಗೂ ಹಿಮಾಲಯಗಳು ಭಾರತದೇಶದಲ್ಲಿ ಉತ್ತರಭಾಗದಲ್ಲಿ ಇರುವಹಾಗೆ ಎಲ್ಲರಿಗೂ ತಿಳಿದಿದೆ. ಪೂರ್ವದಲ್ಲಿ ಇಂದೂಗಳ ಪುರಾಣಗಳಲ್ಲಿ ಕೈಲಾಸ ಪರ್ವತ ಹಿಮಾಲಯಗಳಲ್ಲಿ ಇದೆಯೆಂದು, ಕೈಲಾಸದಲ್ಲಿ ಶಿವನು ನಿವಾಸ ಇರುತ್ತಿದ್ದನೆಂದು ಹೇಳಿಕೊಳ್ಳುತ್ತಿದ್ದೇವೆ. ಕೈಲಾಸದಲ್ಲಿರುವ ಶಿವನು ತಾನು ಜ್ಞಾನಿ ಎಂದು ತಿಳಿಸುವುದಕ್ಕೋಸ್ಕರ ಗುರುತಿಗಾಗಿ, ತನ್ನ ತಲೆಯಲ್ಲಿನ

ಕೂದಲಮುಡಿಯ ಮೇಲೆ ಚಂದ್ರಾಕಾರವನ್ನು ಧರಿಸಿದ್ದಾನೆ. ಅದು ತಿಳಿಯುವಹಾಗೆ ಈದಿನ ಎಲ್ಲಾದರೂ ಶಿವನ ಫೋಟೋ ಕಾಣಿಸಿದರೆ ಆತನ ತಲೆಮೇಲೆ ಅರ್ಧ ಚಂದ್ರಾಕಾರ ಕಾಣಿಸುತ್ತದೆ. ಭಾರತದೇಶಕ್ಕೆ ಎತ್ತರವಾದ ಹಿಮಾಲಯ ಪರ್ವತಗಳ ಮೇಲೆ ಅರ್ಧ ಚಂದ್ರಾಕಾರ ಗುರುತು ಶಿವನ ತಲೆಮೇಲೆ ಬಾವುಟದಂತೆ (ಪತಾಕ) ಇರುವುದರಿಂದ, ಹಿಮಾಲಯಗಳಿಂದ ಕೆಳಗಿನವರೆಗಿರುವ ದೇಶವೆಲ್ಲವನ್ನು ಚಂದ್ರನ ಹೆಸರಿನಿಂದ ಇಂದೂ ದೇಶವೆಂದು ಕರೆಯುತ್ತಿದ್ದರೆಂದು ಹೇಳಬಹುದು. ಈ ವಿಧವಾಗಿ ಚರಿತ್ರೆ ಆಧಾರದಿಂದಲೂ, ಪುರಾಣಗಳ ಸಾಕ್ಷಿಯಿಂದಲೂ, ಭೌಗೋಳಿಕವಾಗಿ ಅರ್ಧಚಂದ್ರಾಕಾರ ಆಕೃತಿ ಇರುವುದರಿಂದಲೂ, ಭಾರತದೇಶವನ್ನು ಜ್ಞಾನಿಗಳ ದೇಶವಾಗಿ ಗುರುತಿಸಿ ಎಲ್ಲರೂ ಇಂದೂ ದೇಶವೆಂದು ಕರೆಯುತ್ತಿದ್ದರು.

ಈ ವಿಧವಾಗಿ ಭಾರತದೇಶ ಇಂದೂ ದೇಶ ಎನ್ನುವುದಕ್ಕೆ ಎಷ್ಟೋ ಚರಿತ್ರೆ ಇದೆ. ನಾನು ಹೆಚ್ಚಾಗಿ ಜ್ಞಾನದ ಪ್ರಕಾರ ನಮ್ಮದು ಇಂದೂ ದೇಶವೆಂದು, ನಾವು ಇಂದೂಗಳೆಂದು, 30 ವರ್ಷಗಳಿಂದ ನಾವು ಹೇಳುತ್ತಿದ್ದರೂ ನಮ್ಮ ಮಾತನ್ನು ಕೇಳದೆ, ನಾವು ಪ್ರತ್ಯೇಕವಾದ ಇಂದೂಮತವನ್ನು ಹಿಂದೂ ಮತಕ್ಕೆ ಪೋಟಿಯಾಗಿ ತಯಾರು ಮಾಡುತ್ತಿದ್ದೇವೆಂದು, ಇಂದೂ ಎನ್ನುವ ಪರಮತವನ್ನು ಬೋಧಿಸುತ್ತಿದ್ದೇವೆಂದು ಚರಿತ್ರೆಯಾಗಲಿ, ಜ್ಞಾನವಾಗಲಿ ತಿಳಿಯದ ಹಿಂದೂ ಮತರಕ್ಷಕರು ನಮ್ಮನ್ನು ಕುರಿತು ಆರೋಪಿಸುವುದು ನಡೆದಿದೆ. ದೊಡ್ಡವರ ಮಾತುಗಳನ್ನೇ ಪರಿಗಣನೆಯೊಳಗೆ ತೆಗೆದುಕೊಳ್ಳಬೇಕು, ಕಡಿಮೆಯವರ ಮಾತುಗಳನ್ನು ಲೆಕ್ಕ ಇಟ್ಟುಕೊಳ್ಳಬಾರದೆಂಬ ಸೂತ್ರದ ಪ್ರಕಾರ, ನಾವು ಚರಿತ್ರೆ ತಿಳಿಯದ ಹಿಂದೂಗಳ ಮಾತುಗಳನ್ನು ಲೆಕ್ಕಿಸಲಿಲ್ಲ. ಅದೇ ಸೂತ್ರದ ಪ್ರಕಾರ ಭಾರತದೇಶದ ಮೊದಲ ಪ್ರಧಾನಿಯಾಗಿ ಕೆಲಸ ಮಾಡಿದ ನೆಹರೂರವರು, ತನ್ನ ಮಗಳು ಇಂದಿರಾಗಾಂಧಿಯವರಿಗೆ ಬರೆದ ಲೇಖನವನ್ನು ಪರಿಗಣನೆಯೊಳಗೆ ತೆಗೆದುಕೊಂಡು, ಅದನ್ನೇ ನಿಮಗೆ ತೋರಿಸುತ್ತಿದ್ದೇನೆ ನೋಡಿರಿ.

ಪ್ರಮುಖರ ಲೇಖೆ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

---

**visit website : www.thraithashakam.org**

ಚಿನ್ನಜೀಯರ್ ಮೊದಲಾದ ಬಹಳಜನ ಸ್ವಾಮೀಜಿಗಳು ಹಿಂದೂ ಶಬ್ಧವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೆ ನಮ್ಮ ತಲೆಯನ್ನು ನಾವೇ ಕತ್ತರಿಸಿಕೊಂಡಂತೆ ಎಂದು ತಮ್ಮ ಉಪನ್ಯಾಸದಲ್ಲಿ ಹೇಳಿದ್ದಾರೆ. ಬಹಳಜನ ಸ್ವಾಮೀಜಿಗಳು ಈ ಶಬ್ಧವನ್ನು ವಿದೇಶಿಯರಾದ ಮುಸ್ಲಿಮ್‌ರು ನಮಗೆ ಆರೋಪಿಸಿದ್ದಾರೆಂದಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೆ ತಿಳುವಳಿಕೆ ಇಲ್ಲದವರೆಂದು ಅರ್ಥವಂತೆ.

ಈ ವಿಧವಾಗಿ ಭಾರತದೇಶ ಇಂದೂ ದೇಶವಾಗಿ ಇದೆಯೆಂಬುವುದಕ್ಕೆ ಎಷ್ಟೋ ಸಾಕ್ಷಿಗಳು ಇವೆ. ಆದರೆ ಈದಿನ ಇಂದೂಗಳು ಹಿಂದೂ ಮತಸ್ಥರಾಗಿ ಬದಲಾಗಿಹೋಗುವುದು ನಡೆದಿದೆ. ಮತ ಎನ್ನುವ ಬಲೆಯಲ್ಲಿ ಸಿಲುಕಿಕೊಂಡ ಭಾರತೀಯರೆಲ್ಲರೂ, ತಾವು ಇಂದೂಗಳೆಂಬ ತಮ್ಮ ಚರಿತ್ರೆಯನ್ನು ತಿಳಿಯದವರಾಗಿ, ಅರ್ಥವಿಲ್ಲದ ಹಿಂದೂ ಪದವನ್ನು ಇಟ್ಟುಕೊಂಡು, ನಾವು ಹಿಂದೂಗಳು ಎನ್ನುತ್ತಿದ್ದಾರೆ. ಈದಿನ ಸ್ವಮತ ರಕ್ಷಣೆಯಲ್ಲಿ ಬಿದ್ದಿರುವ ಹಿಂದೂರಕ್ಷಣ ಸಂಸ್ಥೆಗಳೆಲ್ಲಾ ನಾವು ಏಕೆ ಕ್ಷೀಣದೆಸೆಗೆ ಬಂದು ನಮ್ಮನ್ನು ನಾವು ರಕ್ಷಿಸಿಕೊಳ್ಳಬೇಕಾಗಿ ಬರುತ್ತಿದೆಯೆಂದು ಸ್ವಲ್ಪವೂ ಯೋಚಿಸಲಿಲ್ಲ. ಒಬ್ಬನು ಏನಂದರೆ ಎರಡನೆಯವನು ಅದೇ ಎನ್ನುತ್ತಾ ಹೋಗುತ್ತಿದ್ದಾನೆ ಹೊರತು ಇದು ನಿಜವಾ, ಸುಳ್ಳಾ ಎಂದು ಸ್ವಲ್ಪವೂ ಯೋಚಿಸುತ್ತಿಲ್ಲ. ತಾವು ತಪ್ಪು ಮಾಡುತ್ತಿದ್ದೇವೆಂದು, ನಮ್ಮ ಗೌರವವನ್ನು ನಾವೇ ಇಲ್ಲದಂತೆ ಮಾಡಿಕೊಳ್ಳುತ್ತಿದ್ದೇವೆಂದು ಅಂದುಕೊಳ್ಳದೆ, ತಪ್ಪನ್ನು ಸಮರ್ಥಿಸಿಕೊಳ್ಳುತ್ತಾ ಹಿಂದೂಮತ ಎನ್ನುವುದಕ್ಕೆ ಅರ್ಥವನ್ನು ಹೇಳುವುದಕ್ಕೆ ಸಿಂಧೂನದಿಯನ್ನು ಜೋಡಿಸಿಕೊಂಡು ಹೇಳುತ್ತಿದ್ದಾರೆ. ಸಿಂಧೂನದಿಗೆ ಹಿಂದೂಮತಕ್ಕು ಸಂಬಂಧ ಏನು? ಎಂದು ಸ್ವಲ್ಪವೂ ಆಲೋಚಿಸುತ್ತಿಲ್ಲ. ಸ್ವಮತರಕ್ಷಣ ಎನ್ನುವ ಘೋಷಕರು ಸ್ವಮತ ಯಾವುದೊ, ಪರಮತ ಯಾವುದೊ ತಿಳಿಯದ ಸ್ಥಿತಿಯಲ್ಲಿ ಯಾರು ಜ್ಞಾನವನ್ನು ಹೇಳಿದರೂ, ಅವನು ಇತರ ಮತವನ್ನು ಬೋಧಿಸುತ್ತಿದ್ದಾನೆಂದು ಆರೋಪಣೆ ಮಾಡುವುದು ಪ್ರಾರಂಭಿಸಿದ್ದಾರೆ. ಅದಕ್ಕೆ ತಾರ್ಕಾಣವಾಗಿ (ನಲ್ಗೊಂಡ ಜಿಲ್ಲಾ) ಭುವನಗಿರಿಯಲ್ಲಿ

ಬ್ರಾಹ್ಮಣರೆಲ್ಲರೂ ಪೋಲೀಸ್‌ಸ್ಟೇಷನ್‌ಗೆ ಹೋಗಿ ತ್ರೈತ ಸಿದ್ಧಾಂತ ಎಂಬುದು ಕ್ರೈಸ್ತವರದು, ಆದ್ದರಿಂದ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿರೆಂದು ಗೋಡೆಗಳ ಮೇಲೆ ಬರೆದವರ ಮೇಲೆ ಕೇಸು ಇಡಬೇಕೆಂದು ಆರೋಪಿಸುವುದು, ಅಲ್ಲಿನ ಸಿ.ಐ ಸಹ ಸ್ವಲ್ಪವಾದರೂ ಆಲೋಚಿಸದೆ ತ್ರೈತ ಸಿದ್ಧಾಂತ ಭಗವದ್ಗೀತೆ ಯನ್ನು ನಮ್ಮ ಭಕ್ತರು ತೋರಿಸಿದರೂ, ಕುರುಡರಂತೆ ಕೇಸು ನಮೋದು ಮಾಡುವುದನ್ನು ನೋಡಿದರೆ, ಇಂದೂಗಳು ಹಿಂದೂಗಳಾಗಿ ಬದಲಾಗುವುದೇ ಅಲ್ಲದೆ ಪೂರ್ತಿ ಕುರುಡರಾಗಿದ್ದಾರೆಂದು ಹೇಳಬಹುದು.

ಯಾವ ಮತವೂ ಇಲ್ಲದ ಎರಡುಸಾವಿರ ವರ್ಷಗಳ ಪೂರ್ವದಲ್ಲಿ, ಭಾರತದೇಶದಲ್ಲಿ ಗೌತಮನು ಗಯಾದಲ್ಲಿ ಬೋಧಿವೃಕ್ಷದ ಕೆಳಗೆ ಜ್ಞಾನೋದಯವಾದ ನಂತರ, ಬುದ್ಧನಾಗಿ ಪ್ರಕಟಿಸಿಕೊಂಡು ಕಾಷಾಯ ವಸ್ತ್ರಗಳನ್ನು ಧರಿಸಿ, ಗುಂಡು ಮಾಡಿಸಿಕೊಂಡು, ಪೂರ್ತಿಯಾಗಿ ಸಂಸಾರವನ್ನು ತ್ಯಜಿಸಿ ಅದಕ್ಕು ಮೊದಲು ಇದ್ದ ಮಹರ್ಷಿಗಳಿಗಿಂತ ಸ್ವಲ್ಪ ಭಿನ್ನವಾಗಿ, ತಾನು ಅನುಭೂತಿ ಪಡೆದ ಜ್ಞಾನವನ್ನು ಹೇಳುತ್ತಿದ್ದನು. ಹಿಂದೂಗಳಲ್ಲಿ ಶೂದ್ರಕುಲ ದವನಾದ ಬುದ್ಧನು ಸನ್ಯಾಸಿಯಾಗಿ ಬದಲಾಗಿ ಹೆಚ್ಚಾಗಿ ಭೂತ ದಯವನ್ನು ಬೋಧಿಸುತ್ತಾ, ತನಗೆ ತಿಳಿದ ಜ್ಞಾನವನ್ನು ಹೇಳುವುದು ಆದಿನ ಅಗ್ರಕುಲದವರಾದ ಬ್ರಾಹ್ಮಣರಿಗೆ ಸರಿಹೋಗಲಿಲ್ಲ. ಕಾಷಾಯ ವಸ್ತ್ರಗಳು ಧರಿಸಿ ಸನ್ಯಾಸಿಯಾಗಿದ್ದ ಬುದ್ಧನನ್ನು ಸಹ ಪರಮತದವನಾಗಿ ಪ್ರಚಾರ ಮಾಡಿ ಬುದ್ಧನ ಜ್ಞಾನದಕಡೆ ಯಾರನ್ನು ಹೋಗದಂತೆ ಮಾಡಬೇಕೆಂದು, ಬುದ್ಧನ ನಂತರ ಸ್ವಲ್ಪ ಕಾಲಕ್ಕೆ ಬಂದಿರುವ ಶಂಕರಾಚಾರ್ಯರನ್ನು ಸಾಕ್ಷಾತ್ತೂ ಈಶ್ವರನೆಂಬುವಂತೆ ಪ್ರಚಾರ ಮಾಡಿ, ಬೌದ್ಧ ಸೂತ್ರಗಳನ್ನು ಅಡಗಿಸಿದ್ದಾರೆ. ಭಾರತದೇಶದಲ್ಲಿ ಹುಟ್ಟಿದ ಬೌದ್ಧ ಸೂತ್ರಗಳಿಗೆ ಬುದ್ಧನ ಜ್ಞಾನಕ್ಕೂ ಚೈನಾ, ರಷ್ಯಾ, ಟಿಬೆಟ್, ಜಪಾನ್, ಶ್ರೀಲಂಕ. ಮಲೇಷಿಯಾ, ಥಾಯಿಲಾಂಡ್ ಮೊದಲಾದ ದೇಶಗಳ ಪ್ರಜೆಗಳು ಎಷ್ಟೋ ಜನ ಆಕರ್ಷಿತರಾದರೆ, ಅದು ಹಿಂದೂಮತ ಅಲ್ಲವೆಂದು ಆದಿನದ ಹಿಂದೂ ಗಳಲ್ಲಿನ ಬ್ರಾಹ್ಮಣರು ಹೇಳಿದಾಗ ಬುದ್ಧನ ಸಿದ್ಧಾಂತಗಳು ಸ್ವಲ್ಪ ಬೌದ್ಧಮತವಾಗಿ

ಬದಲಾಗಿಹೋಗಿದೆ. ಹಾಗೆ ಬುದ್ಧನನ್ನು ಬಹಿಷ್ಕರಿಸದೆ ಹೋದರೆ, ಶೂದ್ರನೆಂಬ ಅಸೂಯೆಯಿಂದ ನೋಡದೆ ಹೋಗಿದ್ದರೆ ಈ ದಿನ ಬೌದ್ಧಮತವಾಗಿ ಹೇಳಲ್ಪಡುವುದು ಹಿಂದೂಮತವಾಗಿಯೇ ಇರುತ್ತಿತ್ತು.

ಈ ವಿಧವಾಗಿ ತಮ್ಮ ಸ್ವಾರ್ಥದಿಂದ ನಾವು ಹೊರತು ಇತರ ಕುಲದವರು ಯಾರೂ ಜ್ಞಾನಿಗಳಾಗಿ ಕಾಣಿಸಬಾರದೆಂದು ಅಂದುಕೊಳ್ಳುವುದರಿಂದ ಕೆಲವು ದೇಶಗಳಲ್ಲಿ ವ್ಯಾಪಿಸಿರುವ ಬೌದ್ಧಮತ ಹಿಂದೂಮತದಿಂದ ಬೇರೆಯಾಗಿದೆ. ಅದು ಬೇರೆಯಾಗಲಿಲ್ಲ ಹಿಂದೂಗಳೇ ಬೇರೆಮಾಡಿದ್ದಾರೆ. ಕಾಷಾಯಗಳು ಧರಿಸಿ ಸನ್ಯಾಸ ತೆಗೆದುಕೊಂಡ ಬುದ್ಧನನ್ನು ಶೂದ್ರನೆಂಬ ಅಸೂಯೆಯಿಂದ, ನಮ್ಮ ಹಿಂದೂಮತಕ್ಕೆ ಸಂಬಂಧವಿಲ್ಲವೆಂದು ಅದು ಪರಮತವೆಂದು ಪ್ರಚಾರ ಮಾಡಿ, ಕೇರಳ ಬ್ರಾಹ್ಮಣನಾದ ಶಂಕರಾಚಾರ್ಯರನ್ನು ದೊಡ್ಡವನನ್ನಾಗಿ ಪ್ರಚಾರಮಾಡಿ, ಆತನೊಂದಿಗೆ ಯಾರೂ ಬೌದ್ಧ ಸೂತ್ರಗಳನ್ನು ಆಚರಿಸದಂತಿರಲು ಅದ್ವೈತವನ್ನು ಪ್ರಚಾರ ಮಾಡಿಸಿದ್ದಾರೆ. ಈ ವಿಧವಾಗಿ ನಮ್ಮ ಬೆರಳನ್ನೇ ತೆಗೆದುಕೊಂಡು ನಮ್ಮ ಕಣ್ಣೇ ಇರಿದುಕೊಂಡಂತಾಗಿದೆ. ಹೀಗೆ ಎರಡುಸಾವಿರ ವರ್ಷಗಳ ಪೂರ್ವದಲ್ಲಿಯೇ ಹಿಂದೂಮತ ಕ್ಷೀಣಿಸುವುದಕ್ಕೆ ಪ್ರಾರಂಭಿಸಿದೆ. ನಂತರ ಕ್ರೈಸ್ತವವು ಭಾರತದೇಶದೊಳಗೆ ಬಂದು ಬಹಳ ವೇಗವಾಗಿ ಅಭಿವೃದ್ಧಿಯಾಗಿದೆ. ಅದಕ್ಕೆ ಕಾರಣ ಹಿಂದೂಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಇರುವ ಶೂದ್ರರಲ್ಲಿ ಬ್ರಾಹ್ಮಣರಿಂದ ಅಸಹನೆ ಬೆಳೆದುಹೋಗಿ, ಇತರ ಮತಗಳ ಕಡೆ ವೇಗವಾಗಿ ಹೋಗುವುದಕ್ಕೆ ಪ್ರಾರಂಭಿಸಿದ್ದಾರೆ. ಈದಿನ ಹಿಂದೂಮತ ಎಷ್ಟೋ ಕ್ಷೀಣಿಸಿದ ಸ್ಥಿತಿಯಲ್ಲಿ ಸಹ ತ್ರೈತ ಸಿದ್ಧಾಂತವಾಗಿ ಜೀವಾತ್ಮ, ಆತ್ಮ, ಪರಮಾತ್ಮ ಎಂದು ಮೂರು ಆತ್ಮಗಳನ್ನು ತಿಳಿಸುತ್ತಾ, ಅದೇ ಭಗವದ್ಗೀತೆಯಲ್ಲಿ ಹೇಳಿದ ಕ್ಷರ, ಅಕ್ಷರ, ಪುರುಷೋತ್ತಮನೆಂಬ ಮೂರು ಆತ್ಮಗಳನ್ನು ಹೇಳುತ್ತಿದ್ದರೂ ನಮ್ಮನ್ನು ಸಹ ಬುದ್ಧನನ್ನು ಬಹಿಷ್ಕರಿಸಿದಂತೆ ಪಕ್ಕಕ್ಕೆ ಕಳಿಸಬೇಕೆಂದು, ನಮ್ಮನ್ನು ಪರಮತದವರಂತೆ ಲೆಕ್ಕಹಾಕಿ, ಪರಮತವನ್ನು ಬೋಧಿಸುತ್ತಿದ್ದೇವೆಂದು ಹೇಳುತ್ತಾ, ಕೇಸುಗಳು ಸಹ ದಾಖಲಿಸುತ್ತಿದ್ದಾರೆಂದರೆ ಇಂದಿಗೂ ಸಹ ಶೂದ್ರರೆಂಬ ವಿಪಕ್ಷ ಅಗ್ರಕುಲದವರಲ್ಲಿ ಹೋಗಲಿಲ್ಲವೆಂದು ತಿಳಿಯುತ್ತಿದೆ.

ಕಳೆದ ಸ್ವಲ್ಪಕಾಲದಿಂದ ನಮ್ಮ ಮೇಲೆ ಎಷ್ಟೋ ಆರೋಪಣೆಗಳು ಹಿಂದೂ ಮತದಲ್ಲಿಯೇ ಬಂದರೂ, ಪ್ರಜೆಗಳು ಸತ್ಯವನ್ನು ಗ್ರಹಿಸಿ ನಾವು ಹೇಳುವ ಜ್ಞಾನದ ಕಡೆ ಬರುವುದು ನಡೆಯುತ್ತಿದೆ. ಒಂದು ಹಿಂದೂಗಳೇ ಅಲ್ಲದೆ ಉಳಿದ ಎಲ್ಲಾ ಮತದವರು ಸಹ ನಮ್ಮ ಜ್ಞಾನಕ್ಕೆ ಆಕರ್ಷಿತರಾಗಿದ್ದಾರೆ. ನಮ್ಮ ಹತ್ತಿರ ಎಲ್ಲಾ ಮತಗಳು ಸಮಾನವಾದವೆಂದು ನಾವು ಹೇಳುವುದರಿಂದ, ಇಲ್ಲಿ ಮತಾಂತರಗಳು ಇಲ್ಲದಿರುವುದರಿಂದ, ಯಾವ ಮತದಲ್ಲಿದ್ದರೂ ಅವರಿಗೆ ಜ್ಞಾನವೆಲ್ಲಾ ಒಂದೇ ಎಂದು, ಎಲ್ಲರಿಗೂ ದೇವರು ಒಬ್ಬನೇ ಎಂದು ಹೇಳುವುದರಿಂದಲೂ ಮೂರು ಮತದವರು ನಮ್ಮ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದಾರೆ. ನಮ್ಮ ಗ್ರಂಥಗಳನ್ನು ಎಲ್ಲಾ ಮತದವರು ಓದುತ್ತಿದ್ದಾರೆ. ನನ್ನ ಜ್ಞಾನ ಕೇಳಿದ ಯಾವ ಹಿಂದೂ ಸಹ ಪರಮತದೊಳಗೆ ಹೋಗಬೇಕೆಂದು ಅಂದುಕೊಳ್ಳುತ್ತಿಲ್ಲ. ಹಾಗೆಯೇ ನನ್ನನ್ನು ನೋಡಿದರಾಗಲಿ, ನನ್ನ ಜ್ಞಾನವನ್ನು ನೋಡಿದರಾಗಲಿ ಇತರ ಮತಸ್ಥರು ಯಾರೂ ಅಸೂಯೆಪಡುತ್ತಿಲ್ಲ. ಮತಸಾಮರಸ್ಯಕ್ಕೆ ಈ ಜ್ಞಾನ ಎಷ್ಟೋ ಅಗತ್ಯವೆಂದು ಎಲ್ಲರೂ ಹೇಳುತ್ತಿದ್ದಾರೆ.

ನಾನು ಹುಟ್ಟುವಿಕೆಯಲ್ಲಿ ಹಿಂದೂವಾಗಿ ಹುಟ್ಟಿದರೂ, ಪೂರ್ವದ ಇಂದೂ (ಜ್ಞಾನ) ಲಕ್ಷಣಗಳು ನನ್ನಲ್ಲಿರುವುದರಿಂದ, ನಾನು ಸ್ವಚ್ಛವಾದ ಇಂದೂವೆಂದು ಹೇಳುತ್ತಿದ್ದೇನೆ. ಇಂದೂ ಎಂದರೆ ಜ್ಞಾನಿ ಎಂದು ಪೂರ್ವದಲ್ಲಿರುವ ಅರ್ಥವೇ ಈದಿನ ಸಹ ಇದೆ. ಮೂರು ಮತಗಳಲ್ಲಿ ಮೂರು ಗ್ರಂಥಗಳ ಮೂಲಕ ದೇವರು ತನ್ನ ಜ್ಞಾನವನ್ನು ತಿಳಿಸಿದ್ದಾನೆ. ಆದ್ದರಿಂದ ಯಾವ ಮತದಲ್ಲಿರುವವನಾದರೂ ಅವನ ಗ್ರಂಥದಲ್ಲಿನ ಜ್ಞಾನವನ್ನು ಚೆನ್ನಾಗಿ ತಿಳಿಯಲ್ಪಟ್ಟರೆ, ಅವನು ಆ ಮತದಲ್ಲಿ ಜ್ಞಾನಿ ಎಂದು ಕರೆಯಲ್ಪಡುತ್ತಾನೆ. ದೇವರ ಜ್ಞಾನ ತಿಳಿದವನು ಯಾವ ಮತದಲ್ಲಾದರೂ ಜ್ಞಾನಿಯೇ ಆದ್ದರಿಂದ, ಅವನನ್ನು ಆ ಮತದಲ್ಲಿನ ಇಂದೂವು ಎನ್ನಬಹುದು. ಜ್ಞಾನಿ ಎಂದರೆ ಇಂದೂ ಎನ್ನುವ ಅರ್ಥದ ಪ್ರಕಾರ, ಹಿಂದೂಮತದಲ್ಲಿ ಇಂದೂಗಳು ಇರುವಂತೆ, ಕ್ರೈಸ್ತವ ಮತದಲ್ಲಿ ಇಂದೂಗಳಿರಬಹುದು. ಹಾಗೆಯೇ ಇಸ್ಲಾಮ್ ಮತದಲ್ಲಿನ

ಖುರ್‌ಆನ್ ಗ್ರಂಥವೊಂದರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದವನನ್ನು ಸಹ ಪದ್ಧತಿ ಪ್ರಕಾರ ಇಂದೂ ಎಂದು ಅನ್ನಬಹುದು. ಈ ವಿಧವಾಗಿ ಮೂರು ಮತಗಳಲ್ಲಿ ಇಂದೂಗಳು (ಜ್ಞಾನಿಗಳು) ಇರಬಹುದು. ಮೂರು ಮತಗಳ ಜ್ಞಾನವನ್ನು ತಿಳಿದವನನ್ನು ಸಂಪೂರ್ಣಜ್ಞಾನಿ ಅನ್ನಬಹುದು. ಅಥವಾ ಸಂಪೂರ್ಣ ಇಂದೂವು ಎನ್ನಬಹುದು. ಇಂದೂ ಅಂದರೆ ಆತನು ಯಾವ ಮತದ ಜ್ಞಾನವನ್ನಾದರು ತಿಳಿದಿರಬಹುದು. ಇಂದೂ ಎನ್ನುವ ಪದ ಜ್ಞಾನಕ್ಕೆ ಸಂಬಂಧಿಸಿರುವುದಾಗಲಿ, ಮತಕ್ಕೆ ಸಂಬಂಧಿರುವುದು ಅಲ್ಲ. ಆದ್ದರಿಂದ ಯಾವ ಮತದಲ್ಲಾದರೂ ಇಂದೂಗಳು ಇರಬಹುದು.

ಒಂದು ಮತಕ್ಕೇ ಅಲ್ಲದೆ ಎಲ್ಲಾ ಮತಗಳಿಗು ಸಂಬಂಧಿಸಿದ ಜ್ಞಾನ ತಿಳಿದವನನ್ನು ಸರ್ವಮತ ಜ್ಞಾನಿ ಎಂದೂ, ಸಂಪೂರ್ಣ ಇಂದೂ ಎಂದೂ ಎನ್ನಬಹುದು. ಒಂದು ವಿಧವಾಗಿ ನಾನು ಮೂರು ಮತ ಗ್ರಂಥಗಳ ಜ್ಞಾನವನ್ನು ತಿಳಿದಿದ್ದೇನೆ. ಆದ್ದರಿಂದ ನಾನು ನನ್ನ ಲೆಕ್ಕದಲ್ಲಾಗಲಿ, ನಿಮ್ಮ ಲೆಕ್ಕದಲ್ಲಾಗಲಿ ಸ್ವಚ್ಛವಾದ ಇಂದೂದವನೇ ಎಂದು ಹೇಳಬಹುದು. ಪ್ರಪಂಚ ವಿಷಯಗಳಲ್ಲಿ ತನ್ನನ್ನು ದೊಡ್ಡದಾಗಿ ಹೇಳಿಕೊಳ್ಳುವುದು ಗರ್ವವಾಗುತ್ತದೆ. ಆದರೆ ಜ್ಞಾನ ವಿಷಯದಲ್ಲಿ, ದೇವರ ವಿಷಯದಲ್ಲಿ ಗುಣಗಳಿರುವುದಿಲ್ಲ. ದೇವರ ವಿಷಯದಲ್ಲಿ ಯಾವುದು ಬಚ್ಚಿಟ್ಟುಕೊಳ್ಳಬಾರದು. ಇರುವುದು ಇದ್ದಂತೆ ಹೇಳುವುದು ಒಳ್ಳೆಯದು. ಆದ್ದರಿಂದ ನಾವು ಇರುವುದು ಇದ್ದಂತೆ ಹೇಳಬೇಕೆಂಬ ಉದ್ದೇಶದಿಂದ ನಾನು ಯೋಗೀಶ್ವರನು ಎಂದು ಹೇಳುತ್ತಿದ್ದೇನೆ. ಒಬ್ಬ ಮನುಷ್ಯ ಯೋಗಿಯಾಗಿ ಬದಲಾಗಬೇಕೆಂದರೆ ಮೊದಲು ಸಂಪೂರ್ಣ ಜ್ಞಾನಿಯಾಗಿ ಬದಲಾಗಿರಬೇಕು. ಮೊದಲು ಸಂಪೂರ್ಣ ಜ್ಞಾನಿಯಾದ ನಂತರ ಯೋಗಿಯಾಗಿ ಬದಲಾಗ ಬಹುದು. ಆದ್ದರಿಂದ ಯೋಗಿಯಾದ ನಾನು ಗತದಲ್ಲಿಯೇ ಸಂಪೂರ್ಣ ಜ್ಞಾನಿಯೆಂದು ಹೇಳುವುದಕ್ಕೆ ಸಂಶಯಿಸುತ್ತಿಲ್ಲ. ನಾನು ಸಂಪೂರ್ಣಜ್ಞಾನಿ ಆಗಿರುವುದರಿಂದ ಮೂರು ಮತಗಳ ಜ್ಞಾನ ನನಗೆ ತಪ್ಪದೇ ತಿಳಿದಿರಬೇಕು. ಹಾಗೆ ಜ್ಞಾನ ತಿಳಿದಿದ್ದರೆ ಮೂರು ಮತಗಳು ನನ್ನ ಮತಗಳೇ ಎನ್ನುವ ಭಾವ

ಹೊಂದಿರಬೇಕು. ಯಾರಾದರೂ ಅವರ ಮನೆಯಲ್ಲಿ ಒಂದು ವಸ್ತುವು ಇರಬೇಕಾದ ಜಾಗದಲ್ಲಿ ಇರದೇ ಕೆಳಗೆಬಿದ್ದಿದ್ದರೆ ತಪ್ಪದೆ ಅದನ್ನು ಇರಬೇಕಾದ ಜಾಗದಲ್ಲಿ ಇಡುತ್ತಾರೆ. ಹಾಗೆಯೇ ಅವರ ಮನೆಯಲ್ಲಿ ಕಸಬಿದ್ದಿದ್ದರೆ ತಪ್ಪದೆ ಶುಭ್ರವಾಗಿ ಮಾಡಿಕೊಳ್ಳುತ್ತಾರೆ. ಯಾರ ಮನೆಯನ್ನು ಅವರು ಶುಭ್ರವಾಗಿ ಇಟ್ಟುಕೊಂಡಹಾಗೆ, ನನ್ನದು ಎನ್ನುವುದರಲ್ಲಿ ಇರಬೇಕಾಗಿರುವುದು ಇರದೆಹೋದರೇನೊ, ಇರಬೇಕಾದ ರೀತಿಯಲ್ಲಿ ಇರದೆ ತಲೆಕೆಳಗಾಗಿ ಇದ್ದರೇನೊ, ತಪ್ಪದೆ ಅದನ್ನು ಸರಿಪಡಿಸಬೇಕಾದ ಜವಾಬ್ದಾರಿ ನನಗೆ ಇರುತ್ತದೆ ಅಲ್ಲವೆ! ಹಾಗೆಯೇ ಮೂರು ಮತಗಳನ್ನು ನನ್ನ ಮತಗಳಾಗಿ ತಿಳಿದಾಗ, ಆ ಮೂರು ಮತಗಳಲ್ಲಿ ಏನಾದರೂ ಲೋಪ ಕಾಣಿಸಿದರೆ, ಅದನ್ನು ಸರಿಪಡಿಸುವ ಜವಾಬ್ದಾರಿ ಸಹ ನಮ್ಮಮೇಲೆ ಇರುತ್ತದೆ. ಅಂತಹ ಬಾಧ್ಯತೆಯನ್ನು ನಾನು ಹೊಂದಿದ್ದೇನಾದ್ದರಿಂದ, ಕ್ರೈಸ್ತವ ಮತದಲ್ಲಿ ಯೇಸು ಹೇಳಿದ ಜ್ಞಾನವನ್ನು ಬಿಟ್ಟು ಕ್ರೈಸ್ತವರು ವೇದಗಳನ್ನು ಹೇಳಿಕೊಳ್ಳುವುದು ಒಳ್ಳೆಯದಲ್ಲವೆಂದು, ಯೇಸು ಸಂಪೂರ್ಣ ಜ್ಞಾನವನ್ನು ತಿಳಿಸಿರುವಾಗ, ಅದನ್ನು ಒಂದು ಬಾರಿಯಾದರೂ ಹೇಳದೆ ಒಂದು ಗ್ರಂಥವೆಲ್ಲಾ ವೇದಗಳನ್ನು, ಪುರಾಣಗಳನ್ನು ಬರೆದುಕೊಳ್ಳುವುದು ನಮಗೆ ಸರಿಹೋಗಲಿಲ್ಲ. ಆದ್ದರಿಂದ ಅವರು ಹೇಳಿದ ವೇದಗಳ ವಾಕ್ಯಗಳೆಲ್ಲವನ್ನು ನಾವು ಖಂಡಿಸುವುದು ನಡೆದಿದೆ. ಹಾಗೆಯೇ ಹಿಂದೂ ಮತದಲ್ಲಿನ ಭಗವದ್ಗೀತೆಯಲ್ಲಿ ಕಲಬೆರಕೆಯಾಗಿರುವ ಮಾನವ ಕಲ್ಪಿತ ಶ್ಲೋಕಗಳನ್ನು ತೆಗೆದುಹಾಕಿ ಸ್ವಚ್ಛವಾದ ಭಗವದ್ಗೀತೆಯನ್ನು ರೂಪಿಸುವುದು ನಡೆದಿದೆ. ಹಾಗೆಯೇ ಖುರ್‌ಆನ್‌ನಲ್ಲಿನ ವಾಕ್ಯಗಳು ಮುಸ್ಲಿಮ್‌ರಿಗೆ ಅರ್ಥವಾಗದಿರುವವು ಇದ್ದರೆ, ಅವುಗಳಿಗೂ ಸಹ ಶಾಸ್ತ್ರಬದ್ಧವಾಗಿ ವಿವರ ಹೇಳುವುದು ನಡೆದಿದೆ. ನಾನು ಇಂದೂವಾದ್ದರಿಂದ ಅವರವರ ಮತದಲ್ಲಿರುವವರನ್ನು ಇಂದೂಗಳಾಗಿ (ಜ್ಞಾನಿಗಳಾಗಿ) ತಿದ್ದುವುದು ನನ್ನ ಕನಿಷ್ಠ ಬಾಧ್ಯತೆ. ಆದ್ದರಿಂದ ಮೂರು ಮತಗಳಲ್ಲಿನ ಕಲುಷಿತವನ್ನು ತೊಲಗಿಸುವುದಕ್ಕೆ ನಾನು ಪ್ರಯತ್ನಿಸಬೇಕೆಂದುಕೊಂಡಿದ್ದೇನೆ. ಆ ಪ್ರಯತ್ನದಲ್ಲಿನ ಭಾಗವಾಗಿ **"ಇಂದುವು–ಕ್ರೈಸ್ತವನಾ?"** ಎನ್ನುವ ಗ್ರಂಥದ ಮೂಲಕ ಹಿಂದೂ ಮತದಲ್ಲಿನ ಲೋಪಗಳನ್ನೂ,

ಅತ್ತ ಕ್ರೈಸ್ತವ ಮತದಲ್ಲಿನ ಲೋಪಗಳನ್ನು ಸರಿಮಾಡುವ ಪ್ರಯತ್ನ ಮಾಡಿದ್ದೇವೆ. ತಪ್ಪನ್ನು ತಪ್ಪಾಗಿ, ಸರಿಯನ್ನು ಸರಿಯೆಂದು ಹೇಳಿದ್ದೇವೆ. ವೇದಗಳನ್ನು ಹಿಂದೂಮತದಲ್ಲಿ ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರೂ, ಭಗವದ್ಗೀತೆಯಲ್ಲಿ ದೇವರು ಹೇಳಿದ ವಾಕ್ಯಕ್ಕೆ ಬೆಲೆಕೊಡುತ್ತಾ, ಪೂರ್ತಿಯಾಗಿ ವೇದಗಳನ್ನು ಖಂಡಿಸಿಹಾಕಿದ್ದೇವೆ. ಇದು ನನ್ನ ಮತವೆಂದು, ಇದು ಪರಮತವೆಂದು ಬೇಧವಿಲ್ಲದೆ ಮೂರು ದೈವ ಗ್ರಂಥಗಳನ್ನು ಕುರಿತು ಎಲ್ಲರಿಗೂ ಅರ್ಥವಾಗುವಂತೆ ಹೇಳುತ್ತಾ ಬಂದಿದ್ದೇವೆ. ಮೂರು ಮತಗಳಲ್ಲಿನ ಯಾರಾದರೂ ಅವರ ಗ್ರಂಥವಾಗಿರುವ ಖುರ್‌ಆನ್‌ನಲ್ಲಾಗಲಿ, ಬೈಬಲ್‌ನಲ್ಲಾಗಲಿ, ಭಗವದ್ಗೀತೆಯಲ್ಲಾ ಗಲಿ, ಜ್ಞಾನವನ್ನು ಅರ್ಥಮಾಡಿಕೊಂಡು ಜ್ಞಾನಿಯಾಗಿ ಬದಲಾಗಿದ್ದರೆ ಅವನನ್ನು ಜ್ಞಾನಿ ಇಲ್ಲವೆ ಇಂದೂ ಅನ್ನಬೇಕು. ಜ್ಞಾನಿಯಾದ ನಂತರ ಯಾರಾಗಲಿ ನಾನು ಇಂತಹ ಮತಸ್ಥನೆಂದು ಹೇಳಿಕೊಳ್ಳುವುದಕ್ಕಿಂತ ನಾನು ಇಂತಹ ದೈವಗ್ರಂಥ ಒಂದರ ಇಂದೂವೆಂದು ಹೇಳಿಕೊಳ್ಳುವುದು ಒಳ್ಳೆಯದು. ಇಂದೂ ಎನ್ನುವ ಪದ ಮತವನ್ನು ಸೂಚಿಸುವುದಿಲ್ಲ, ಇಂದೂ ಎನ್ನುವ ಪದ ಕೇವಲ ಜ್ಞಾನವನ್ನು ಮಾತ್ರವೇ ಸೂಚಿಸುತ್ತದೆ. ಆದ್ದರಿಂದ ಯಾವ ಮತಸ್ಥನಾದರೂ ನಾನು ಇಂತಹ ಇಂದೂವೆಂದು ಹೇಳಿರಿ. ಕ್ರೈಸ್ತವನು ಬೈಬಲ್ ಜ್ಞಾನ ಎಲ್ಲವನ್ನು ತಿಳಿದ ನಂತರ ಆತನು ಜ್ಞಾನಿಯಾಗಿ ಬದಲಾಗಿರುತ್ತಾನೆ. ಆದ್ದರಿಂದ ಆತನು ನಾನು ಇಂದೂವೆಂದು ಹೇಳಿಕೊಳ್ಳಬಹುದು. ಇಲ್ಲದಿದ್ದರೆ ಮತದ ಹೆಸರು ಹೇಳದೆ ಅವರ ಗ್ರಂಥದ ಹೆಸರು ಹೇಳಿ ನಾನು ಭಗವದ್ಗೀತೆ ಇಂದೂವೆಂದೊ, ಖುರ್‌ಆನ್ ಇಂದೂವೆಂದೊ, ಬೈಬಲ್ ಇಂದೂವೆಂದೊ ಹೇಳಬಹುದು. ಇನ್ನೂ ಮುಂದಕ್ಕೆ ಹೋಗಿ ಮೂರು ದೈವ ಗ್ರಂಥಗಳ ಜ್ಞಾನವನ್ನು ಸಂಪೂರ್ಣವಾಗಿ ತಿಳಿಯಲ್ಪಟ್ಟವನು ಸಂಪೂರ್ಣ ಜ್ಞಾನಿಯಾಗಿ ಹೇಳಿಕೊಳ್ಳಬಹುದು. ಸಂಪೂರ್ಣ ಜ್ಞಾನಿಯಾದ ನಂತರ ತನ್ನ ಮತವನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುವುದಾಗಲಿ, ತಾನು ಇಂತಹ ಮತಸ್ಥನೆಂದು ಹೇಳಿಕೊಳ್ಳುವುದು ಒಳ್ಳೆಯದಲ್ಲ. ಹಾಗೆ ಹೇಳಿಕೊಳ್ಳುವುದರಿಂದ ಯಾರೂ ಸಂಪೂರ್ಣ ಜ್ಞಾನಿ ಅನಿಸಿಕೊಳ್ಳುವುದಿಲ್ಲ.

ಮತ ಎನ್ನುವುದು ಯಾವ ಮನುಷ್ಯನಿಗಾದರೂ ಪ್ರಾಥಮಿಕ ಅಜ್ಞಾನವಾದ್ದರಿಂದ, ಮತವನ್ನು ಹೇಳಿಕೊಳ್ಳುವ ಯಾರಾಗಲಿ ಜ್ಞಾನಿಯಾಗ ಲಾರನು ಎಂದು ಮೊದಲೇ ಹೇಳಿಕೊಂಡಿದ್ದೇವೆ. ಇದಕ್ಕು ಮೊದಲ ಗ್ರಂಥಗಳಲ್ಲಿ ಸಹ ಬರೆದುಕೊಂಡಿದ್ದೇವೆ. ದೇವರುಕೊಟ್ಟ ಮೂರು ದೈವಗ್ರಂಥಗಳಿಗು ಮತದ ಹೆಸರು ಹೋರಿಸುವುದು ಸಹ ದೊಡ್ಡ ಅಪರಾಧವೇ. ದೇವರು ಮತದ ಹೆಸರು ಹೇಳಿ ಯಾವ ಗ್ರಂಥವೂ ಕೊಡಲಿಲ್ಲ. ಯಾವ ಗ್ರಂಥ ಕೊಟ್ಟರೂ ಅದು ಸಕಲ ಜನರಿಗೆ ಎಂದು ಕೊಟ್ಟಿದ್ದಾನೆ ಹೊರತು, ಇಂತಹ ಮತದವರಿಗೇ ಎಂದು ಕೊಡಲಿಲ್ಲ. ಆದ್ದರಿಂದ ಮತಪ್ರಸಕ್ತಿ ಇಲ್ಲದಂತೆ ಮೂರು ಮತಗಳಲ್ಲಿ ನಿನಗಿಷ್ಟವಾದ ಯಾವ ಗ್ರಂಥವನ್ನು ಅನುಸರಿಸಿದರೂ, ಅದು ಮನುಷ್ಯನನ್ನು ದೇವರ ಹತ್ತಿರಕ್ಕೆ ಸೇರಿಸಬಲ್ಲದು. ಕೈಲಾದರೆ ಮೂರು ಗ್ರಂಥಗಳನ್ನು ಓದಿ ಜ್ಞಾನವನ್ನು ಗ್ರಹಿಸಿಕೊಂಡರೆ ಮತ್ತಷ್ಟು ಬೇಗನೆ ದೇವರ ಹತ್ತಿರಕ್ಕೆ ಸೇರಬಹುದು.

ಈ ದಿನ ಎಲ್ಲಾ ಮತದವರು ಬೆಳಗ್ಗೆ ಎದ್ದಾಗಿನಿಂದ ಮತ್ತೆ ರಾತ್ರಿ ಮಲಗುವವರೆಗು ಬದುಕುಬಾಳ್ವೆಗಾಗಿ ಅಲೆದಾಡುವುದೇ ನಡೆಯುತ್ತಿದೆ. ಆದರೆ ಕೆಲವರು ಮಾತ್ರ ದೇವರು ಜ್ಞಾನದ ಮೇಲೆ ಸ್ವಲ್ಪ ಧ್ಯಾಸ ಹೊಂದಿದ್ದಾರೆ. ಅವರಿಗೋಸ್ಕರ ಕೆಲವರು ಬೋಧಕರು ತಮ್ಮ ಗ್ರಂಥದಲ್ಲಿನ ಜ್ಞಾನವನ್ನು ಬೋಧಿಸುತ್ತಿರುತ್ತಾರೆ. ಯಾವ ಮತದವರು ಆ ಮತದಲ್ಲಿನ ಜ್ಞಾನವನ್ನು ಹೇಳುತ್ತಾ, ಇತರ ಮತದವರನ್ನು ತಮ್ಮ ಮತದೊಳಗೆ ಸೆಳೆದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿರುತ್ತಾರೆ. ನಾವು ನೋಡಿರುವುದರಲ್ಲಿ ಕ್ರೈಸ್ತವರು, ಮುಸ್ಲಿಮ್‌ರನ್ನು ತಮ್ಮ ಮತದೊಳಗೆ ಬದಲಾಯಿಸಬೇಕೆಂದುಕೊಳ್ಳಲಿಲ್ಲ. ಹಾಗೆಯೇ ಮುಸ್ಲಿಮ್‌ರು ಕ್ರೈಸ್ತವರನ್ನು ಬದಲಾಯಿಸಬೇಕೆಂದುಕೊಳ್ಳಲಿಲ್ಲ. ಹೇಗಾದರೂ ಹಿಂದೂ ಮತದಲ್ಲಿನ ಮನುಷ್ಯರನ್ನು ತಮ್ಮತಮ್ಮ ಮತದೊಳಗೆ ಸೇರಿಸಬೇಕೆಂದು ಉಳಿದ ಎರಡು ಮತಗಳ ಬೋಧಕರು ಪ್ರಯತ್ನಿಸುತ್ತಿದ್ದಾರೆ. ಕ್ರೈಸ್ತವ ಬೋಧಕರು, ಪ್ರಚಾರಕರು ಹಿಂದೂಗಳನ್ನು ತಮ್ಮ ಮತದೊಳಗೆ ಹೆಚ್ಚಾಗಿ ಬದಲಾಯಿಸಿ ಕೊಂಡಿದ್ದಾರೆ. ಹಾಗೆ ಬದಲಾದವರು ಅಲ್ಲಿಗೆಹೋಗಿ ಬೈಬಲ್ ಗ್ರಂಥವನ್ನು

ಓದಿ ಜ್ಞಾನವನ್ನು ತಿಳಿದುಕೊಂಡು ಜ್ಞಾನಿಯಾಗಿ ಬದಲಾದರೆ ಫರವಾಗಿಲ್ಲ. ಮತ ಬದಲಾದರೂ ತನ್ನ ಲಾಭಕ್ಕೋಸ್ಕರ ಎನ್ನುವಂತೆ, ಗ್ರಂಥದಲ್ಲಿನ ಜ್ಞಾನವನ್ನು ತಿಳಿದುಕೊಳ್ಳದೆ ಕಾಲ ಕಳೆಯುವವರು ಸಹ ಇದ್ದಾರೆ. ಅವರು ಯಾವ ಮತದಲ್ಲಿದ್ದರೂ ಒಂದೇ.

ಯಾರಾದರೂ ಹಿಂದೂಮತದಲ್ಲಿ ನನಗೆ ಜ್ಞಾನ ಹೇಳುವವರು ಯಾರೂ ಇಲ್ಲವೆಂದೊ, ಹಿಂದೂಮತದಲ್ಲಿ ಅಗ್ರಕುಲದವರ ಆಕ್ಷೇಪಣೆ ಬಹಳ ಇದೆ, ಅಂತಹ ವಿವಕ್ಷ ಇಲ್ಲದ ಕ್ರೈಸ್ತವ ಮತದೊಳಗೆ ಹೋಗುತ್ತೇನೆಂದೊ, ಹಿಂದೂ ಮತದಲ್ಲಿ ಭಗವದ್ಗೀತೆ ಅರ್ಥ ಆಗಲಿಲ್ಲವೆಂದೋ, ಯಾವುದೋ ಒಂದು ವಿಧವಾಗಿ ಜ್ಞಾನಕ್ಕೋಸ್ಕರ ಮತಾಂತರಿಸಿಕೊಂಡು ಕ್ರೈಸ್ತವರಲ್ಲಿ ಬೆರೆತುಹೋಗಿ, ಬೈಬಲ್ ಗ್ರಂಥವನ್ನು ಓದಿ ಚೆನ್ನಾಗಿ ಅರ್ಥಮಾಡಿಕೊಂಡು ಬೈಬಲ್ ಜ್ಞಾನದ ಪ್ರಕಾರ ಜ್ಞಾನಿ ಆದರೆ ಆಗ ನಾನು ಇಂದೂವು (ಜ್ಞಾನಿ) ಎಂದು ಪ್ರಕಟಿಸಿ ಕೊಳ್ಳಬಹುದು. ಹಾಗೆ ಜ್ಞಾನಿಯಾಗಿ ಬದಲಾದವನು ತಾನು ಬೈಬಲ್ ಜ್ಞಾನವನ್ನು ಗ್ರಹಿಸಿಕೊಂಡು ಜ್ಞಾನಿ ಆಗಿದ್ದೇನೆಂದು ಅಂದುಕೊಳ್ಳುತ್ತಾನಾಗಲಿ, ಕ್ರೈಸ್ತವ ಮತದಿಂದ ಜ್ಞಾನಿಯಾಗಿದ್ದೇನೆಂದು ಯಾರೂ ಅಂದುಕೊಳ್ಳುವುದಿಲ್ಲ. ಹಾಗೆ ಜ್ಞಾನಿ ಆದವನು ಕ್ರೈಸ್ತವನಾ? ಅಂದರೆ ಅಲ್ಲವೆಂದು ಹೇಳಬಹುದು. ಅವನು ಕ್ರೈಸ್ತವ ಮತದಲ್ಲಿನವನೆ ಅಲ್ಲವೆ ಎಂದು ಯಾರಾದರೂ ಕೇಳಿದರೆ ಬೈಬಲ್ ಜ್ಞಾನ ತಿಳಿಯದ ಮೊದಲು ಕ್ರೈಸ್ತವನೆಯಾಗಲಿ, ಬೈಬಲ್ ಜ್ಞಾನ ತಿಳಿದ ನಂತರ ಜ್ಞಾನಿಯಾದ ನಂತರ ಕ್ರೈಸ್ತವನು ಅಲ್ಲ. ಆಗ ಅವನು ಇಂದೂವಾಗಿ ತಯಾರಾ ಗಿದ್ದಾನೆಂದು ಹೇಳಬಹುದು. ಆಗ ಇಂದೂ ಕ್ರೈಸ್ತವನಾ? ಎಂದು ಪ್ರಶ್ನಿಸಿದರೆ ಕ್ರೈಸ್ತವನು ಅಲ್ಲ ಇಂದೂವೇ ಎಂದು ಹೇಳಬಹುದು. ಬೈಬಲ್ ಓದಿದ ನಂತರ, ಅದರಲ್ಲಿನ ಜ್ಞಾನವನ್ನು ಗ್ರಹಿಸಿಕೊಂಡ ನಂತರ, ಆ ಗ್ರಂಥದಲ್ಲಿ ಕ್ರೈಸ್ತವ ಎನ್ನುವ ಹೆಸರು ಇಲ್ಲದಿರುವುದರಿಂದ, ತನ್ನನ್ನು ಕ್ರೈಸ್ತವನನ್ನಾಗಿ ಹೇಳಿಕೊಳ್ಳುವುದಕ್ಕೆ ಇಷ್ಟಪಡುವುದಿಲ್ಲ. ತನ್ನನ್ನು ಜ್ಞಾನಿಯಾಗಿಯೇ ಹೇಳಿಕೊಳ್ಳುವುದಕ್ಕೆ ಇಷ್ಟಪಡುತ್ತಾನೆ. ಆದ್ದರಿಂದ ಮತಗಳಿಗೆ ಅತೀತವಾಗಿರುವ ಇಂದೂವೆಂದು ಹೇಳಿಕೊಳ್ಳುತ್ತಾನೆ.

ಮೂರು ದೈವ ಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರ್ಆನ್ ಗ್ರಂಥಗಳ ಸಾರಾಂಶ ತಿಳಿದವನು ಸಂಪೂರ್ಣ ಜ್ಞಾನಿಯಾಗಿ ಕೊನೆಗೆ ಯೋಗಿಯಾಗಿ ಬದಲಾಗಬಲ್ಲನು. ಹಾಗೆ ಬದಲಾದವನು ಮೂರು ದೈವ ಗ್ರಂಥಗಳಲ್ಲಿನ ಜ್ಞಾನ ವಿಷಯಗಳನ್ನು ಸುಲಭವಾಗಿ ವಿವರಿಸಿ ಹೇಳಬಲ್ಲನು, ಎಂದು ನಾವು ಹೇಳಿದಾಗ ಒಬ್ಬ ಕ್ರೈಸ್ತವ ಬೋಧಕನು ನಮ್ಮ ಮಾತುಗಳು ಕೇಳಿ ಆತನು ಹೀಗೆ ಅಂದಿದ್ದಾನೆ.

**ಬೋಧಕನು :–** ನಾನು ಕ್ರೈಸ್ತವನು ಎಂದು ಹೇಳಿಕೊಳ್ಳುತ್ತಿದ್ದೇನೆ. ನನಗೆ ಬೈಬಲ್ ಜ್ಞಾನವೆಲ್ಲಾ ತಿಳಿದಿದೆ. ಬೈಬಲ್ ಜ್ಞಾನವೆಲ್ಲಾ ತಿಳಿದಿರುವ ನನ್ನನ್ನು ಜ್ಞಾನಿ ಎಂದು ಯಾರಾದರೂ ಎನ್ನುತ್ತಾರೆ. ಜ್ಞಾನಿ ಅದಷ್ಟುಮಾತ್ರಕ್ಕೆ ನಾನು ಹುಟ್ಟಿದ ಮತವನ್ನು ಹೇಗೆ ಅಲ್ಲವೆನ್ನುತ್ತೇನೆ? ನಾನು ಹುಟ್ಟಿದ್ದು ಮೊದಲು ಐವತ್ತು (50) ವರ್ಷಗಳಿಂದ ಕ್ರೈಸ್ತವ ಮತದಲ್ಲಿದ್ದು ಈದಿನ ಜ್ಞಾನಿಯಾ ದಷ್ಟುಮಾತ್ರಕ್ಕೆ ಕ್ರೈಸ್ತವನು ಅಲ್ಲವೆಂದು ಹೇಗೆ ಹೇಳುತ್ತೇನೆ? ಹಾಗೆ ಬಲವಂತವಾಗಿ ಹೇಳಿದರೂ, ಕ್ರೈಸ್ತವ ವಾಸನೆ ನನ್ನೊಳಗಿನಿಂದ ಹೇಗೆ ಹೋಗುತ್ತದೆ? ಆದ್ದರಿಂದ ನಾನು ಜ್ಞಾನಿಯೇ ಆದರೂ ಕ್ರೈಸ್ತವನೇ ಎಂದು ಹೇಳುತ್ತಿದ್ದೇನೆ.

**ನಾನು :–** ನಾನು ಕ್ರೈಸ್ತವನು ಎಂದು ಹೇಳುತ್ತಿದ್ದೀಯಾ ಎಂದರೆ ಬೈಬಲ್ ಜ್ಞಾನ ನಿನಗೆ ತಿಳಿಯದೆಂದೇ ಹೇಳಬಹುದು. ನಾನು ಕ್ರೈಸ್ತವನು ಅಲ್ಲ ಎಂದು ಅರ್ಥವಾದಾಗಲೆ ಜ್ಞಾನಿ ಆಗುತ್ತೀಯಾ. ಕ್ರೈಸ್ತವನಾಗಿ ಆಗದಂತಿರುವುದೇ ಜ್ಞಾನಿಯಾಗಿ ಬದಲಾಗುವುದು, ಆದ್ದರಿಂದ ನಿನಗೆ ಇನ್ನೂ ಬೈಬಲ್‌ನಲ್ಲಿನ ಜ್ಞಾನ ತಿಳಿದಿಲ್ಲವೆಂದೇ ಹೇಳಬಹುದು. ಬೈಬಲ್ ತಿಳಿಯದೆಂದು ನಿನಗೆ ತಿಳಿಯುವುದಕ್ಕೆ ನಾನು ಬೈಬಲ್ ಗ್ರಂಥದಲ್ಲಿನ ಒಂದು ವಾಕ್ಯವನ್ನು ಕೇಳುತ್ತೇನೆ. ನಾನು ಕ್ರೈಸ್ತವನೇ ಎಂದು ಹೇಳುವವನು ವಾಕ್ಯಕ್ಕೆ ಸರಿಯಾದ ಜ್ಞಾನ ವಿವರವನ್ನು ಹೇಳಲಾರನು.

**ಬೋಧಕನು :–** ನೀವು ಬೈಬಲ್ ಎಂದು ಹೇಳಿ ಇತರ ಗ್ರಂಥಗಳಲ್ಲಿನ ಪ್ರಶ್ನೆ ಕೇಳಬಾರದು. ಖಚಿತವಾಗಿ ಬೈಬಲ್‌ನಲ್ಲಿನ ಪ್ರಶ್ನೆಯನ್ನೇ ಕೇಳಿರಿ?

**ನಾನು :–** ಹಾಗೆಯೇ ಕೇಳುತ್ತಿದ್ದೇನೆ. ಬೈಬಲ್ ಗ್ರಂಥದಲ್ಲಿ ಯೋಹಾನು ಸುವಾರ್ತೆ 6ನೇ ಅಧ್ಯಾಯದಲ್ಲಿ 46ನೇ ವಾಕ್ಯದಲ್ಲಿ ಹೀಗೆ ಇದೆ. "ದೇವರ ಹತ್ತಿರದಿಂದ ಬಂದವನು ಹೊರತು ಮತ್ತೆ ಯಾರೂ ತಂದೆಯನ್ನು ನೋಡಿರುವುದಿಲ್ಲ." ಈ ವಾಕ್ಯವನ್ನು ನೋಡಿದ್ದೀರಾ ಅಲ್ಲವೆ! ದೇವರ ಹತ್ತಿರದಿಂದ ಬಂದವನು ಮಾತ್ರವೇ ತಂದೆಯನ್ನು ನೋಡಿದ್ದಾನೆ ಎಂದು ಅರ್ಥವಾಗುತ್ತಿದೆ ಅಲ್ಲವೆ! ದೇವರಹತ್ತಿರದಿಂದ ಬಂದವನು ಯಾರು?

**ಬೋಧಕನು :–** ದೇವರ ಹತ್ತಿರದಿಂದ ಬಂದವನು ಯೇಸುಪ್ರಭು ಮಾತ್ರವೆ. ಆತನು ಬಂದಿದ್ದಾನಾದ್ದರಿಂದ ಆತನು ಮಾತ್ರ ತಂದೆಯನ್ನು ನೋಡಿದ್ದಾನೆ.

**ನಾನು :–** ಯೇಸು ತಂದೆ ಯಾರು?

**ಬೋಧಕನು :–** ನೀವು ಬಹಳ ತಿಳುವಳಿಕೆಯಿಂದ ಪ್ರಶ್ನೆಯನ್ನು ಕೇಳುತ್ತಿದ್ದೀರಾ. ಇಂಥವನು ತಂದೆ ಎಂದು ಹೇಳಿದರೆ ನೀನು ನೋಡಲಿಲ್ಲವಲ್ಲ! ಯೇಸು ಒಬ್ಬನೇ ತಾನೆ ನೋಡಿರುವುದು ಆತನ ತಂದೆ ನಿನಗೆ ಹೇಗೆ ಗೊತ್ತು? ಎಂದು ಕೇಳುತ್ತೀಯಾ. ಹೇಳದೇ ಹೋದರೆ ಬೋಧಕನಾಗಿದ್ದು ಯೇಸುವನ್ನು ಕುರಿತು ಬೋಧಿಸುವಾಗ ಆತನ ತಂದೆ ತಿಳಿಯದಾ? ಎಂದು ಕೇಳುತ್ತೀಯಾ.

**ನಾನು :–** ನೀನು ನೋಡಿದ್ದೀಯಾ? ಎಂದು ನಾನು ಕೇಳಲಿಲ್ಲ. ಇಂಥದೆಂದು ತಿಳಿದಿದೆಯಾ? ಎಂದು ಕೇಳುತ್ತಿದ್ದೇನೆ.

**ಬೋಧಕನು :–** ಯೋಹಾನು ಸುವಾರ್ತೆ ಆರನೆಯ ಅಧ್ಯಾಯದಲ್ಲಿಯೇ 27ನೇ ವಾಕ್ಯದಲ್ಲಿ "ತಂದೆಯಾದ ದೇವರು ಆತನಿಗೆ ಮುದ್ರೆಹಾಕಿದ್ದಾನೆ." ಎಂದು ಇದೆ ಆದ್ದರಿಂದ. ಆತನ ತಂದೆ ದೇವರೇ ಎಂದು ಹೇಳಬಹುದು.

**ನಾನು :–** ನಿಮ್ಮ ತಂದೆ ಯಾರು? ಪ್ರಪಂಚರೀತ್ಯಾ ಯಾರಾದರೂ ಇರಬಹುದು. ಆದರೆ ಜ್ಞಾನದ ಪ್ರಕಾರ ನಿನ್ನ ತಂದೆ ಯಾರು?

**ಬೋಧಕನು :–** ಮತ್ತಾಯ ಸುವಾರ್ತೆ 23ನೇ ಅಧ್ಯಾಯ 9ನೇ ವಾಕ್ಯದಲ್ಲಿ "ಒಬ್ಬನೇ ನಿಮ್ಮ ತಂದೆ ಆತನು ಪರಲೋಕದಲ್ಲಿದ್ದಾನೆ." ಎಂದು ಇದೆ. ಆದ್ದರಿಂದ ನಮ್ಮ ತಂದೆ ಸಹ ದೇವರೇ ಎಂದು ಎಲ್ಲರೂ ದೇವರಮಕ್ಕಳೇ ಎಂದು ಎಲ್ಲರಿಗೂ ದೇವರು ಒಬ್ಬನೇ ತಂದೆಯೆಂದು ತಿಳಿದಿದೆ.

**ನಾನು :–** ಎಲ್ಲರಿಗೂ ತಂದೆ ದೇವರೇ ಎಂದಾಗ ನೀನು ಯಾರ ಹತ್ತಿರದಿಂದ ಬಂದಿದ್ದೀಯಾ? ದೇವರ ಹತ್ತಿರದಿಂದ ಬಂದಿದ್ದೀಯಾ? ಸಾತಾನು ಹತ್ತಿರದಿಂದ ಬಂದಿದ್ದೀಯಾ?

**ಬೋಧಕನು :–** ದೇವರ ಹತ್ತಿರದಿಂದಲೇ ಬಂದಿದ್ದೇನೆ. ಎಲ್ಲರೂ ದೇವರ ಹತ್ತಿರದಿಂದಲೇ ಬಂದಿದ್ದೇವೆ. ಎಲ್ಲರಿಗೂ ಆತನೇ ಸೃಷ್ಠಿಕರ್ತ.

**ನಾನು :–** ಎಲ್ಲರ ವಿಷಯವನ್ನು ಕೇಳಲಿಲ್ಲ. ನಿನ್ನ ವಿಷಯವನ್ನು ಮಾತ್ರ ಕೇಳುತ್ತಿದ್ದೇನೆ. ನೀನು ದೇವರ ಹತ್ತಿರದಿಂದ ಬಂದಿದ್ದರೇ, ದೇವರ ಹತ್ತಿರದಿಂದ ಬಂದವನು ಹೊರತು ಯಾರೂ ತಂದೆಯನ್ನು ನೋಡಿರುವುದಿಲ್ಲ ಎಂದು ಯೇಸುಪ್ರಭು ಅಂದಿದ್ದಾನೆ ಅಲ್ಲವೆ! ಆತನು ಹೇಳಿದಹಾಗೆ ನೀವು ತಂದೆಯಾದ ದೇವರನ್ನು ನೋಡಿದ್ದೀರಾ?

**ಬೋಧಕನು :–** ಎಲ್ಲರೂ ದೇವರ ಹತ್ತಿರದಿಂದ ಬಂದವರೇ ಆದ್ದರಿಂದ ತಂದೆಯನ್ನು ನೋಡಿಯೇ ಇರುತ್ತೇವೆ.

**ನಾನು :–** ನಾಲ್ಕು ಪ್ರಶ್ನೆಗಳಿಗೆ ಮೊದಲು ನೀವೇ ದೇವರ ಹತ್ತಿರದಿಂದ ಬಂದವನು ಯೇಸು ಒಬ್ಬನೇ ಎಂದು, ಆತನು ಮಾತ್ರವೇ ತಂದೆಯನ್ನು ನೋಡಿದ್ದಾನೆಂದು ಹೇಳಿದ್ದೀರ. ಈಗ ಎಲ್ಲರೂ ದೇವರ ಹತ್ತಿರದಿಂದ ಬಂದಿದ್ದೇವೆ ಎನ್ನುತ್ತಿದ್ದೀರ. ಅಷ್ಟೇ ಅಲ್ಲದೆ ತಂದೆಯನ್ನು ಸಹ ನೋಡಿದ್ದೇವೆ ಎನ್ನುತ್ತಿದ್ದೀರ. ನೀವು ಹಾಗೆ

ನೋಡಿರುವುದಿಲ್ಲವೆಂದು ನೀವು ಅಸತ್ಯವನ್ನು ಹೇಳುತ್ತಿದ್ದೀರಾ ಎಂದು ನಾವು ಎನ್ನುತ್ತೇವೆ. ಇದಕ್ಕೆ ನೀವೇನನ್ನುತ್ತೀರಾ?

**ಬೋಧಕನು :–** ದೇವರ ಹತ್ತಿರದಿಂದ ಬಂದವರು ಹೊರತು ಎಂದು ದೇವರು ಅಂದಿದ್ದಾನಾಗಲಿ, ಯೇಸು ಒಬ್ಬನೇ ನನ್ನ ಹತ್ತಿರದಿಂದ ಬಂದಿದ್ದಾನೆಂದು, ಉಳಿದವರು ಯಾರೂ ನನ್ನ ಹತ್ತಿರದಿಂದ ಬರಲಿಲ್ಲವೆಂದು ಹೇಳಲಿಲ್ಲವೆ! ನಾವೂ ಸಹ ಅಲ್ಲಿಂದಲೇ ಬಂದಿದ್ದೇವೆ. ನಮ್ಮ ತಂದೆ ಸಹ ದೇವರು, ಆದ್ದರಿಂದ ನಮ್ಮ ತಂದೆಯನ್ನು ನಾವು ತಿಳಿದ್ದಿದ್ದೇವೆ. ನಮ್ಮ ತಂದೆಯಾದ ದೇವರನ್ನು ನಾವು ನೋಡಲಿಲ್ಲವೆಂದು ನೀವು ಹೇಗೆ ಹೇಳುತ್ತೀರಾ?

**ನಾನು :–** ಇದೇ ಯೋಹಾನು ಸುವಾರ್ತೆ ಐದನೇ ಅಧ್ಯಾಯದಲ್ಲಿ 37ನೇ ವಾಕ್ಯದಲ್ಲಿ "ನೀವು ಯಾವ ಕಾಲದಲ್ಲಾದರೂ, ಆತನ ಸ್ವರ ಕೇಳಲಿಲ್ಲ, ಆತನ ಸ್ವರೂಪವನ್ನು ನೋಡಲಿಲ್ಲ" ಎಂದು ಇದೆ ಅಲ್ಲವೆ! ಇದಕ್ಕೇನನ್ನುತ್ತೀರಾ. ಯೇಸು ಹೇಳಿದ ಮಾತು ಅಸತ್ಯ ಎನ್ನುತ್ತೀರಾ?

**ಬೋಧಕನು :–** ಯೇಸು ಹೇಳಿರುವುದು ಅಸತ್ಯವೆಂದು ನಾನು ಹೇಳಲಿಲ್ಲ. ಆತನು ಹೇಳಿರುವುದು ವಾಸ್ತವವೇ. ಆದರೆ ಅರ್ಥ ಮಾಡಿಕೊಳ್ಳುವುದರಲ್ಲಿ ನಮ್ಮಲ್ಲಿಯೇ ಲೋಪ ಇರಬಹುದು ಅಲ್ಲವೆ!

**ನಾನು :–** ನೀವೇ ಹೇಳಿರಿ ಹೇಗೆ ಅರ್ಥ ಮಾಡಿಕೊಳ್ಳಬೇಕೋ?

**ಬೋಧಕನು :–** ಯಾರೂ ಆತನ ಸ್ವರ ಕೇಳಲಿಲ್ಲ, ಆತನ ಸ್ವರೂಪವನ್ನು ನೋಡಲಿಲ್ಲ ಎಂದು ಹೇಳಿರುವುದು ಕ್ರೈಸ್ತವರನ್ನು ಕುರಿತು ಅಲ್ಲ. ಕ್ರೈಸ್ತವರು ಅಲ್ಲದವರನ್ನು ಕುರಿತು ಹೇಳಿದ್ದಾನೆ. ಕ್ರೈಸ್ತವರಿಗೆ ತಂದೆ ಯಾರೋ, ದೇವರು ಯಾರೋ ತಿಳಿದಿದೆ.

(ಇಲ್ಲಿ ಬೋಧಕನು ಪೂರ್ತಿ ತಪ್ಪುಹೆಜ್ಜೆ ಹಾಕಿದ್ದಾನೆ. (ಮತ್ತಾಯ ಸುವಾರ್ತೆ 28–19ರಲ್ಲಿ) ಸಮಸ್ತ ಜನರಿಗು ತನ್ನ ಬೋಧನೆಯೆಂದು ಯೇಸು

ಹೇಳಿರುವಾಗ, ಈ ಮಾತು ಕ್ರೈಸ್ತವರಿಗೆ ಹೇಳಿರುವುದೆಂದೂ, ಆ ಮಾತು ಇತರ ಮತದವರಿಗೆಂದೂ ಹೇಳುವುದು ಪೂರ್ತಿ ತಪ್ಪೆಂದು, ಬೈಬಲ್ ಜ್ಞಾನದ ಪ್ರಕಾರ ಬೋಧಕನು ಮಾತನಾಡದೆ ಹೋಗಿದ್ದಾನೆಂದು, ಆದ್ದರಿಂದ ಆತನು ಜ್ಞಾನಿ ಅಲ್ಲವೆಂದು ನಿರೂಪಿಸಲ್ಪಟ್ಟಿದೆ.)

ಮೇಲಿನ ಮಾತುಗಳನ್ನನುಸರಿಸಿ ದೇವರು ಯಾರೋ, ತಂದೆ ಯಾರೋ ಅರ್ಥವಾಗದ ಸ್ಥಿತಿಯಲ್ಲಿ ಬೋಧಕರು ಸಹ ಇದ್ದಾರೆಂದು ತಿಳಿಯುತ್ತಿದೆ. ಬೈಬಲ್ ಗ್ರಂಥದಲ್ಲಿನ ನಾಲ್ಕು ಸುವಾರ್ತೆಗಳಲ್ಲಿ ಯೇಸು ಏನು ಹೇಳಿದ್ದಾನೊ ತಿಳಿಯದ ಸ್ಥಿತಿಯಲ್ಲಿ ಈಗಿನ ಕ್ರೈಸ್ತವರು ಇದ್ದಾರೆ. ಅಂತಹ ಸ್ಥಿತಿಯಲ್ಲಿ ಬೋಧಕರಿದ್ದು ತಾವು ಬೈಬಲ್ ಗ್ರಂಥದಲ್ಲಿನ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸದೆ, ತಮಗಿರುವ ಜ್ಞಾನದಿಂದಲೇ ಹಿಂದೂಗಳನ್ನು ಕ್ರೈಸ್ತವರನ್ನಾಗಿ ಮಾರ್ಪಡಿಸುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಪ್ರತಿ ಕ್ರೈಸ್ತವ ಬೋಧಕನ ಅಂತರಂಗ ದಲ್ಲಿ, ನನಗೆ ಬೈಬಲ್ ಎಲ್ಲಾ ತಿಳಿದಿದೆ ಎಂಬ ಭಾವವೇ ಇದೆಯೇ ಹೊರತು, ತಿಳಿಯಬೇಕಾಗಿರುವುದು ಎಷ್ಟೋ ಇದೆಯೆಂಬ ಭಾವ ಇಲ್ಲ. ಮೇಲಾಗಿ ಎಷ್ಟು ಬಲೆ ಹಾಕಿದರೆ ಅಷ್ಟು ಮೀನುಗಳು ದೊರೆಯುತ್ತವೆಂಬಂತೆ, ಕೆರೆಯಲ್ಲಿನ ಮೀನುಗಳಂತಿರುವ ಹಿಂದೂಗಳನ್ನು ಕ್ರೈಸ್ತವರನ್ನಾಗಿ ಮಾರ್ಪಡಿಸುವುದಕ್ಕೆ ನೋಡುತ್ತಿದ್ದಾರೆ ಹೊರತು ಬೇರೆ ಉದ್ದೇಶ ನಮಗೆ ಕಾಣಿಸುತ್ತಿಲ್ಲ. ಕೊನೆಗೆ ಹಿಂದೂಗಳನ್ನು ತಮ್ಮ ಮತದೊಳಗೆ ಬದಲಾಯಿಸಿಕೊಳ್ಳುವುದಕ್ಕೆ, ಬೈಬಲ್ ಜ್ಞಾನವನ್ನು ಸಹ ಬದಲಾಯಿಸಿ ಹೇಳುವುದಕ್ಕೆ ಸಜ್ಜಾಗಿದ್ದಾರೆ.

ಭಗವದ್ಗೀತೆ ಭೂಮಿಮೇಲಕ್ಕೆ ಬಂದಿರುವ ಪ್ರಥಮ ದೈವ ಗ್ರಂಥ. ನಂತರ ಸ್ವಲ್ಪ ಕಾಲಕ್ಕೆ ದ್ವಿತೀಯ ದೈವ ಗ್ರಂಥವಾಗಿ ಬೈಬಲ್ ಬಂದಿದೆ. ಆ ನಂತರ ಸ್ವಲ್ಪಕಾಲಕ್ಕೆ ಅಂತಿಮ ದೈವ ಗ್ರಂಥವಾಗಿ ಖುರ್‌ಆನ್ ಗ್ರಂಥ ಬಂದಿದೆ. ಮುಂದೆ ಹಿಂದೆ ಮೂರು ಗ್ರಂಥಗಳು ಬಂದರೂ ಅವುಗಳಲ್ಲಿ ದೇವರು ತನ್ನ ಜ್ಞಾನವನ್ನೇ ಹೇಳಿಕಳಿಸಿದ್ದಾನೆ. ಮೂರು ಗ್ರಂಥಗಳಲ್ಲಿ ಮಾನವ ಕಲ್ಪಿತ ಜ್ಞಾನ ಸ್ವಲ್ಪ ಸೇರಿದ್ದರೂ, ಅದನ್ನು ಪಕ್ಕಕ್ಕಿಟ್ಟು ನೋಡಿದರೆ ಮೂರರಲ್ಲಿ ದೇವರ ಜ್ಞಾನ

ಇದೆಯೆಂದು ತಿಳಿಯುತ್ತಿದೆ. ಆ ವಿಷಯ ಕ್ರೈಸ್ತವ ಬೋಧಕರಿಗೆ ತಿಳಿಯದಿರುವುದರಿಂದ ತಮ್ಮ ಬೈಬಲ್ ಮಾತ್ರವೇ ದೇವರನ್ನು ಕುರಿತು ಬೋಧಿಸುತ್ತಿದೆಯೆಂದುಕೊಂಡಿದ್ದಾರೆ. ಉಳಿದ ಎರಡು ಗ್ರಂಥಗಳನ್ನು ಅವರು ಬೈಬಲ್‌ಗೆ ಸಮಾನವಾಗಿ ನೋಡಲಿಲ್ಲ. ತಮ್ಮ ಜ್ಞಾನವೇ ದೊಡ್ಡದೆಂದು, ತಮ್ಮ ದೇವರೇ ನಿಜವಾದ ದೇವರೆಂದು ಅಂದುಕೊಂಡಿದ್ದಾರೆ. ಬೈಬಲ್ ಗ್ರಂಥ ಭಗವದ್ಗೀತೆಯನ್ನು ಶ್ರೇಷ್ಠ ಗ್ರಂಥವೆಂದು ಸಮರ್ಥಿಸುತ್ತಿದೆಯೆಂದು, ಮತ್ತಾಯ ಸುವಾರ್ತೆಯಲ್ಲಿ ಐದನೆಯ ಅಧ್ಯಾಯದಲ್ಲಿ 17, 18ನೇ ವಚನಗಳಲ್ಲಿ ಇದೆಯೆಂದು ಕ್ರೈಸ್ತವರು ಮರೆತುಹೋಗಿದ್ದಾರೆ. ಆ ವಾಕ್ಯದಲ್ಲಿ ಧರ್ಮಶಾಸ್ತ್ರವೆಂದು ಹೇಳಿರುವಾಗ, ಧರ್ಮಶಾಸ್ತ್ರವೆಂದರೆ ಏನೋ ವಾಸ್ತವವಾಗಿ ಅರ್ಥವಾಗಲಿಲ್ಲ. ಧರ್ಮಶಾಸ್ತ್ರ ಇಂತಹದೆಂದು ತಿಳಿಯದಿರುವುದರಿಂದ, ಭಗವದ್ಗೀತೆ ಮತ್ತು ಬೈಬಲ್ ಎರಡರಲ್ಲಿ ಧರ್ಮಶಾಸ್ತ್ರ ಒಳಗೊಂಡಿದೆಯೆಂದು ತಿಳಿಯದಿರುವುದರಿಂದ, ನಮ್ಮ ಗ್ರಂಥ, ನಮ್ಮ ಜ್ಞಾನ ದೊಡ್ಡದೆಂಬ ಭಾವದಲ್ಲಿದ್ದು ನಿಮ್ಮ ಹಿಂದೂಮತವನ್ನು ಬಿಟ್ಟು ನಮ್ಮ ಕ್ರೈಸ್ತವ ಮತದೊಳಗೆ ಬನ್ನಿ ಎಂದು ಬೋಧಿಸುತ್ತಿದ್ದಾರೆ. (ಪಾತ ರೋತ ಕ್ರೊತ್ತ ವಿಂತ) ಎನ್ನುವಂತೆ ಹಿಂದೂಗಳಲ್ಲಿ ಅಗ್ರಕುಲಗಳು ವಿಧಿಸಿದ ಅಂಟ ಬಾರದತನವನ್ನು ಭರಿಸಲಾರದೆ ಬಹಳಜನ ಹಿಂದೂಗಳು ಕ್ರೈಸ್ತವಮತದಲ್ಲಿ ಸೇರಿಹೋಗಿದ್ದಾರೆ. ಇಲ್ಲಿಗೆ ಎಷ್ಟೋ ಜನ ಹಿಂದೂಗಳು ಕ್ರೈಸ್ತವರಾಗಿ ಬದಲಾಗಿ ಹೋದರೆ, ಅದೇ ದಾರಿಯಲ್ಲಿ ಎಷ್ಟೋ ಜನ ಹಿಂದೂಗಳು ಕ್ರೈಸ್ತವರಾಗಿ ಬದಲಾಗುವುದಕ್ಕೆ ಪ್ರಯತ್ನಿಸುತ್ತಿದ್ದಾರೆಂದು ಅಂದುಕೊಳ್ಳುತ್ತಿದ್ದೇನೆ. ಆದರೆ ಆ ವಿಧವಾಗಿ ಯಾರೂ ಮತವನ್ನು ಮತಾಂತರಿಸದೆ ಇರುವಹಾಗೆ ನಾವು ಈ ಗ್ರಂಥವನ್ನು ಬರೆಯಬೇಕಾಗಿ ಬಂದಿದೆ. ಈ ಗ್ರಂಥ ಮತಾಂತರದ ಮೇಲೆ ಬ್ರಹ್ಮಾಸ್ತ್ರದಂತೆ ಕೆಲಸ ಮಾಡಬಲ್ಲದು. ಈ ಗ್ರಂಥವನ್ನು ಓದಿದ ನಂತರ ಯಾರೂ ತಮ್ಮ ಮತವನ್ನು ಬದಲಾಯಿಸುವುದಕ್ಕೆ ಪ್ರಯತ್ನಿಸುವುದಿಲ್ಲ. ಎಲ್ಲಾ ಗ್ರಂಥಗಳು ಸಮಾನವೆಂದು, ಎಲ್ಲಾ ಮತಗಳೂ ಸಮಾನವೆಂದು, ಎಲ್ಲಾ ಮತಗಳಿಗು ಒಬ್ಬನೇ ದೇವರೆಂದು, ತಿಳಿದ ನಂತರ ಯಾರೂ ತಮ್ಮ ಮತವನ್ನು ಬಿಟ್ಟು ಮತ್ತೊಂದು ಮತದೊಳಗೆ ಹೋಗುವುದಿಲ್ಲ.

ಒಂದುವೇಳೆ ಹಿಂದೂಮತದಲ್ಲಿರುವ ಅಗ್ರಕುಲದವರಾದ ಬ್ರಾಹ್ಮಣರು ಅಂಟಬಾರದತನವನ್ನು ತಮಗೆ ಅಂಟಿಸಿ ಅವಮಾನಿಸುತ್ತಿದ್ದಾರೆಂದು, ದೇವರ ವಿಷಯದಲ್ಲಿ ತಾವೇ ಹಕ್ಕುದಾರರಾಗಿರುವಂತೆ ಪ್ರವರ್ತಿಸುತ್ತಿದ್ದಾರೆಂದು ಹಿಂದೂಗಳು ಆರೋಪಿಸಿ, ಆದ್ದರಿಂದಲೆ ನಾವು ಮತ ಬದಲಾಯಿಸುತ್ತಿದ್ದೇವೆಂದರೆ ಅದಕ್ಕೆ ಸಮಾಧಾನವಾಗಿ ನಾವು ಹೀಗೆ ಹೇಳುತ್ತಿದ್ದೇವೆ. ಇಲಿ ಬಂದು ಕೆರೆಯಲ್ಲಿ ಬಿದ್ದರೆ, ಬೆಕ್ಕು ಬರುತ್ತದೆಂದು ಭಯಪಟ್ಟು ಮೀನುಗಳು ಕೆರೆಯನ್ನು ಬಿಟ್ಟು ಹೋಗುತ್ತವಾ? ಹೋಗುವುದಿಲ್ಲ ಅಲ್ಲವೆ! ಬೆಕ್ಕುಬಂದರೆ ತಪ್ಪಿಸಿಕೊಳ್ಳುವುದಕ್ಕೆ ನೀರು ಇವೆ, ನೀರಿನಲ್ಲಿ ಸಿಗದಂತೆ ಓಡಿಹೋಗುವ ಸಾಮರ್ಥ್ಯ ಇದೆ ಬಿಡು ಅಂದುಕೊಂಡು ಧೈರ್ಯವಾಗಿ ಇದ್ದಂತೆ, ಬ್ರಾಹ್ಮಣರು ಅಂಟಬಾರದವರೆಂದು ನೀಚವಾಗಿ ನೋಡುತ್ತಿದ್ದಾರೆ ಅಂದಾಗ ಅವರ ಹತ್ತಿರಕ್ಕೆ ನೀವು ಹೋಗದೆ ಅವರನ್ನೇ ನೀವು ಬಹಿಷ್ಕಾರ ಮಾಡಬಹುದಲ್ಲವೆ! ಅವರ ಹತ್ತಿರಕ್ಕೆ ನೀವು ಹೋದರೆ ಅಂಟಬಾರದತನ, ಅವರ ಹತ್ತಿರಕ್ಕೆ ನೀವು ಹೋಗದೆಹೋದರೆ ಅವರು ನಿಮ್ಮನ್ನು ಅವಮಾನಿಸುವುದು, ನೀಚವಾಗಿ ನೋಡುವುದು, ಏನೂ ಇರುವುದಿಲ್ಲ ಅಲ್ಲವೆ! ಒಂದುವೇಳೆ ದೇವರ ಜ್ಞಾನ ತಿಳಿಯಬೇಕೆಂದರೆ ಪೂರ್ವದಲ್ಲಿ ಅವರೇ ಹೇಳುತ್ತಿದ್ದರು. ಈದಿನ ಹಾಗಲ್ಲದೆ ಎಲ್ಲರೂ ಓದುಕೊಳ್ಳುವಂತೆ ಎಷ್ಟೋ ಆಧ್ಯಾತ್ಮಿಕ ಗ್ರಂಥಗಳಿವೆ. ಅಷ್ಟೇ ಅಲ್ಲದೆ ಎಲ್ಲರಿಗೂ ದೊರೆಯುವಂತೆ ಭಗವದ್ಗೀತಾ ಗ್ರಂಥ ಎಲ್ಲಾ ಭಾಷೆಗಳಲ್ಲಿ ಇದೆ. ಏನಾದರೂ ಸ್ವತಃವಾಗಿ ಓದಿಕೊಂಡು ದೈವಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಎಲ್ಲರಿಗೂ ಅನುಕೂಲವಾಗಿ ಮೂರು ದೈವ ಗ್ರಂಥಗಳು ತೆಲುಗು ಭಾಷೆಯಲ್ಲಿಯೇ ಅಲ್ಲದೆ, ಯಾರಿಗೆ ಬೇಕಾದ ಭಾಷೆಯಲ್ಲಿ ಅವರಿಗೆ ಲಭ್ಯವಾಗುತ್ತಿವೆ. ಹಾಗಿರುವಾಗ ಅಗ್ರಕುಲದವರ ಹತ್ತಿರಕ್ಕೆ ಹೋಗದಂತೆ ಗ್ರಂಥಗಳು ಓದಿಕೊಂಡು ದೈವಜ್ಞಾನವನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬಹುದು. ಎಲ್ಲಾದರೂ ಅರ್ಥವಾಗದ ವಿಷಯಗಳಿದ್ದರೆ ನಮ್ಮಂತಹವರನ್ನು ಸಂಪರ್ಕಿಸಿ ಕೇಳಿ ತಿಳಿದುಕೊಳ್ಳಬಹುದು. ಹಾಗಲ್ಲದೆ ಬ್ರಾಹ್ಮಣರನ್ನು ನೆಪವಾಗಿ ತೋರಿಸಿ ಮತವನ್ನು ತಮ್ಮ ಆದಾಯ

ಕ್ಕೋಸ್ಕರವಾಗಲಿ, ಆರ್ಥಿಕ ತೊಂದರೆಗಳು ಇಲ್ಲದಂತೆ ನಡೆಯುತ್ತದೆಂದಾಗಲಿ, ಮತವನ್ನು ಬದಲಾಯಿಸಿಕೊಳ್ಳಬೇಡಿ ಎಂದು ತಿಳಿಸುತ್ತಿದ್ದೇವೆ.

ಮುಖ್ಯವಾಗಿ ಹಿಂದೂಗಳಿಗೆ ದೈವಜ್ಞಾನ ತಿಳಿಯದಂತೆ ಹೋಗಿದೆ, ಆದ್ದರಿಂದ ಇತರರು ಹಿಂದೂಗಳನ್ನು ಸುಲಭವಾಗಿ ತಮ್ಮ ಮತದೊಳಗೆ ಮತಾಂತರಿಸಿಕೊಳ್ಳುತ್ತಿದ್ದಾರೆಂದು ತಿಳಿದ ನಾವು ಹಾಗೆ ನಡೆಯದಂತಿರುವುದಕ್ಕೆ ಮೊದಲು ಹಿಂದೂಗಳಿಗೆ ಜ್ಞಾನವನ್ನು ತಿಳಿಸಬೇಕೆಂಬ ಉದ್ದೇಶದಿಂದ, ಎಲ್ಲರಿಗೂ ಅರ್ಥವಾಗುವಂತೆ ನಾವು ಭಗವದ್ಗೀತೆಯನ್ನು ಬರೆದು ಕೊಟ್ಟಿದ್ದೇವೆ. ಭಗವದ್ಗೀತೆ ಯಲ್ಲಿ ಮುಖ್ಯವಾಗಿ ಆತ್ಮಗಳನ್ನು ಕುರಿತು ಹೇಳುವುದು ನಡೆದಿದೆ. ಪುರುಷೋತ್ತಮ ಪ್ರಾಪ್ತಿ ಯೋಗ ಎನ್ನುವ ಅಧ್ಯಾಯದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳನ್ನು ಬಿಡಿಸಿ ವಿವರವಾಗಿ ಹೇಳಿದ್ದೇವೆ. ಇಲ್ಲಿಯವರೆಗು ಯಾರೂ ತಿಳಿಸದ ವಿಧವಾಗಿ ಅನೇಕ ವಿಷಯಗಳನ್ನು ವಿವರವಾಗಿ ಹೇಳಿದ್ದೇವೆ. ಅದ್ವೈತ ಸಿದ್ಧಾಂತ ಆಧಾರವಾಗಿ ಶಂಕರಾಚಾರ್ಯರು ತನ್ನ ಜ್ಞಾನವನ್ನುಪಯೋಗಿಸಿ ಭಗವದ್ಗೀತೆಯನ್ನು ಅನುವಾದಿಸಿ ಶಂಕರಭಾಷ್ಯ ಭಗವದ್ಗೀತೆ ಎಂದಿದ್ದಾನೆ. ಹಾಗೆಯೇ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಕಾರ ಭಗವದ್ಗೀತೆಯನ್ನು ಬರೆದಿದ್ದಾರೆ. ಪ್ರಸ್ತುತ ನಾವು ತ್ರೈತ ಸಿದ್ಧಾಂತದ ಪ್ರಕಾರ ನಮ್ಮ ಜ್ಞಾನವನ್ನು ಉಪಯೋಗಿಸಿ ಭಗವದ್ಗೀತೆಯನ್ನು "ತ್ರೈತ ಸಿದ್ಧಾಂತ ಭಗವದ್ಗೀತೆ" ಯಾಗಿ ಬರೆಯುವುದು ನಡೆದಿದೆ.

ನಾವು ಬರೆದ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಕ್ಷರನು, ಅಕ್ಷರನು, ಪುರುಷೋತ್ತಮನು ಎನ್ನುವ ಪದಗಳಿಗೆ ಇಲ್ಲಿಯವರೆಗೂ ಯಾವ ಭಗವದ್ಗೀತೆಯಲ್ಲಾಗಲಿ, ಯಾವ ರಚನಕಾರನಾಗಲಿ ಹೇಳದ ವಿಷಯವನ್ನು ನಾವು ಹೇಳಿರುವುದರಿಂದ ತ್ರೈತ ಸಿದ್ಧಾಂತ ಭಗವದ್ಗೀತೆ ಸಂಪೂರ್ಣ ಜ್ಞಾನದಿಂದ ಕೂಡಿಕೊಂಡ ಭಗವದ್ಗೀತೆ ಆಗಿದೆ. ದ್ವಿತೀಯ ದೈವ ಗ್ರಂಥವಾದ ಬೈಬಲ್ ನಲ್ಲಿಯೂ, ಹಾಗೆಯೇ ಅಂತಿಮ ದೈವ ಗ್ರಂಥವಾದ ಖುರ್ಆನ್ ನಲ್ಲಿಯೂ, ಆ ಎರಡು ಗ್ರಂಥಗಳಿಗಿಂತ ಮೊದಲು ಬಂದ ಗ್ರಂಥವಾದ ಭಗವದ್ಗೀತೆಯನ್ನು

ಆ ಎರಡು ಗ್ರಂಥಗಳು ಸಮರ್ಥಿಸುತ್ತಿವೆ. ಬೈಬಲ್, ಖುರ್‌ಆನ್ ಗ್ರಂಥಗಳು ಮೊದಲುಬಂದ ಗ್ರಂಥವೊಂದರ ಜ್ಞಾನ ದೊಡ್ಡದೆಂದು ಧೃಢೀಕರಿಸುತ್ತಾ ಸಾಕ್ಷಿಯನ್ನು ಕೊಡುತ್ತಿವೆ. ಖುರ್‌ಆನ್ ಗ್ರಂಥದಲ್ಲಿ 6ನೇ ಸುರಾದಲ್ಲಿ 92ನೇ ವಾಕ್ಯದಲ್ಲಿಯೂ, ಬೈಬಲ್ ಗ್ರಂಥ ಮತ್ತಾಯ ಸುವಾರ್ತೆ ಐದನೇ ಅಧ್ಯಾಯದಲ್ಲಿ 17ನೇ ವಾಕ್ಯದಲ್ಲಿಯೂ ಮೊದಲುಬಂದ ಭಗವದ್ಗೀತೆಯನ್ನು ಧೃಢೀಕರಿಸುವುದು ಇದೆ. ಹಾಗೆ ಧೃಢೀಕರಿಸುವುದಕ್ಕೆ ಅಸಲಾದ ಕಾರಣವೇನೆಂದರೆ ಆ ಎರಡು ಗ್ರಂಥಗಳಲ್ಲಿಯೂ ಭಗವದ್ಗೀತೆಯಲ್ಲಿನ ವಾಕ್ಯಗಳೇ ಇವೆ. ಆದರೆ ಭಗವದ್ಗೀತೆ ಯಲ್ಲಿನ ಮುಖ್ಯ ಸೂತ್ರಗಳು ಬೈಬಲ್‌ನಲ್ಲಿಯೂ, ಖುರ್‌ಆನ್ ಗ್ರಂಥದಲ್ಲಿಯೂ ಇವೆಯೆಂದು ಯಾರಿಗು ತಿಳಿಯದು. ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಿರುವ ವಿಷಯವು ಸಹ ಮೂರು ಮತದವರಿಗೆ ತಿಳಿಯದಂತೆ ಹೋಗಿದೆ.

ಈದಿನ ಹಿಂದೂಮತ ಗ್ರಂಥವಾಗಿ ಭಗವದ್ಗೀತೆಯನ್ನು ಮನುಷ್ಯರು ಹೇಳಿಕೊಳ್ಳುವುದು ನಡೆಯುತ್ತಿದೆ. ಹಾಗೆಯೇ ಕ್ರೈಸ್ತವರು ಅವರ ಮತ ಗ್ರಂಥವಾಗಿ ಬೈಬಲ್‌ನ್ನು ಹೇಳಿಕೊಳ್ಳುವುದು ನಡೆಯುತ್ತಿದೆ. ಮುಸ್ಲಿಮ್‌ರು ಸಹ ಖುರ್‌ಆನ್‌ನನ್ನು ಅವರ ಗ್ರಂಥವಾಗಿ ಹೇಳಿಕೊಳ್ಳುತ್ತಿದ್ದಾರೆ. ಬೈಬಲ್, ಖುರ್‌ಆನ್ ಎರಡು ಗ್ರಂಥಗಳು ಮೊದಲು ಬಂದ ಭಗವದ್ಗೀತೆಯನ್ನು ಧೃಢೀಕರಿಸುತ್ತಿರುವಾಗ, ಮೇಲೆ ಕ್ರೈಸ್ತರು, ಮುಸ್ಲಿಮ್‌ರು ಹಿಂದೂಗಳನ್ನು ತಮ್ಮ ಮತದಲ್ಲಿ ಸೇರಿಸಿಕೊಳ್ಳುವುದಕ್ಕೆ ಧೃಢೀಕರಿ ಸಿಕೊಂಡಿದ್ದಾರೆ. ಬೈಬಲ್, ಖುರ್‌ಆನ್ ಗ್ರಂಥಗಳು ಎರಡೂ ಭಗವದ್ಗೀತೆಯಲ್ಲಿನ ಮುಖ್ಯ ಸೂತ್ರಗಳನ್ನು ಹೊಂದಿದ್ದು, ನಾವು ಈ ಗ್ರಂಥಗಳ ಕಡೆಯವರೆಂದು ಭಗವದ್ಗೀತೆಯನ್ನು ಬಲಪಡಿಸುತ್ತಿವೆ. ಆ ವಿಷಯ ತಿಳಿಯದ ಕ್ರೈಸ್ತರು, ಮುಸ್ಲಿಮ್‌ರು, ಭಗವದ್ಗೀತೆಯಲ್ಲಿನ ಜ್ಞಾನ ಬೇರೆ, ನಮ್ಮ ಜ್ಞಾನ ಬೇರೆ ಎನ್ನುತ್ತಿದ್ದಾರೆ. ಅವರಿಗೆ ತಿಳಿದರೂ, ತಿಳಿಯದೆ ಹೋದರೂ, ಭಗವದ್ಗೀತೆಯಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇದೆ. ಭಗವದ್ಗೀತೆ ಜ್ಞಾನವೇ ಬೈಬಲ್‌ನಲ್ಲಿಯೂ, ಖುರ್‌ಆನಲ್ಲಿಯೂ ಇರುವುದರಿಂದ, ಒಬ್ಬ ಮನುಷ್ಯ ಯಾವ ಮತದಲ್ಲಿದ್ದರೂ ಅವನು ಜ್ಞಾನಿಯಾದರೆ ಭಗವದ್ಗೀತೆ ಜ್ಞಾನಕ್ಕೆ ಸಂಬಂಧಿಸಿದ್ದಾನೆಂದೇ

ಹೇಳಬಹುದು. ಅಂತಹದರಲ್ಲಿ ಯಾವ ಮನುಷ್ಯ ಯಾವ ಮತದಲ್ಲಿದ್ದರೂ ಅವನು ಪ್ರಥಮ ದೈವ ಗ್ರಂಥವನ್ನು ಅನುಸರಿಸಿದ ಜ್ಞಾನದಲ್ಲಿದ್ದಾನೆಂದೇ ಹೇಳಬಹುದು. ಎಲ್ಲಾ ಮತಗ್ರಂಥಗಳೊಂದಿಗೆ ಪ್ರಥಮ ದೈವಗ್ರಂಥವೊಂದರ ಜ್ಞಾನ ಮುಡಿಹಾಕಲ್ಪಟ್ಟಿರುವುದರಿಂದ ಮನುಷ್ಯ ಯಾವ ಮತದಲ್ಲಿದ್ದರೂ, ಯಾವ ಗ್ರಂಥವೊಂದರ ಜ್ಞಾನ ಹೊಂದಿದ್ದರು, ಆತನನ್ನು ದೈವಜ್ಞಾನಿ ಎಂದೇ ಹೇಳಬಹುದು. ಜ್ಞಾನಿ ಎಂದರೆ ಇಂದೂ. ಆದ್ದರಿಂದ ಒಬ್ಬ ಮನುಷ್ಯ ಯಾವ ಮತದಲ್ಲಿ ಜ್ಞಾನಿಯಾದರೂ, ಆ ಮನುಷ್ಯನನ್ನು ಇಂದೂವಾಗಿಯೇ ಪರಿಗಣಿಸಬೇಕು. ಅಂಥವನಿಗೆ ಮತವನ್ನು ಜೋಡಿಸಬಾರದು. ಆದ್ದರಿಂದ ಇಂದೂವು ಕ್ರೈಸ್ತವನಾ? ಎಂದು ಅನ್ನುತ್ತಿದ್ದೇವೆ. ಹಾಗೆಯೇ ಇಂದೂ ಮುಸ್ಲಿಮಾ? ಎಂದೂ, ಇಂದೂ ಹಿಂದೂವಾ? ಎಂದೂ ಕೇಳಬಹುದು.

ಒಬ್ಬ ಮನುಷ್ಯ ಇಂದೂವಾದರೆ ಆತನು ತನಗೆ ಸಂಬಂಧಿಸಿದ ಜ್ಞಾನ ಉಳಿದ ಎರಡು ಗ್ರಂಥಗಳಲ್ಲಿ ಇದೆಯೆಂದು ಗ್ರಹಿಸುವನು. ಉಳಿದ ಎರಡು ಗ್ರಂಥಗಳಲ್ಲಿರುವ ಜ್ಞಾನವನ್ನು ಗ್ರಹಿಸಿದ ನಂತರ ಆ ಮನುಷ್ಯನಿಗೆ ಎಲ್ಲಾ ಮತಗಳು ತನ್ನವೇ ಎಂಬ ಭಾವನೆ ಬರುತ್ತದೆ. ಒಂದು ಮತದಲ್ಲಿದ್ದೂ ಸಹ ಜ್ಞಾನ ತಿಳಿಯದೆ ಮತಸ್ಥನಾಗಿ ಮಾತ್ರ ಇದ್ದರೆ, ಆತನಿಗಿರುವ ಅಜ್ಞಾನದಿಂದ ಉಳಿದ ಎರಡುಮತಗಳು ಅನ್ಯಮತಗಳಾಗಿಯೇ ಕಾಣಿಸುತ್ತವೆ. ಅಂತಹವನನ್ನು ಜ್ಞಾನಿ ಎಂದು ಅನ್ನಲಾರೆವು. ಹಾಗೆಯೇ ಇಂದೂವು ಎಂದೂ ಅನ್ನಲಾರೆವು. ಅಂತಹವನು ಯಾವ ಮತದಲ್ಲಿದ್ದರೆ ಆ ಮತಸ್ಥನನ್ನಾಗಿಯೇ ಹೇಳಬಹುದು. ದೇವರ ಜ್ಞಾನವಿಲ್ಲದವನನ್ನು ಮುಸ್ಲಿಮ್ ಎಂದೋ, ಕ್ರೈಸ್ತವನೆಂದೋ, ಹಿಂದೂ ಎಂದೋ ಮತದ ಹೆಸರಿನಿಂದ ಕರೆಯಬಹುದು, ಒಂದು ಮತದಲ್ಲಿರುವ ಆತನು ಮೊದಲು ತನ್ನ ಗ್ರಂಥದಲ್ಲಿನ ಜ್ಞಾನವನ್ನು ತಿಳಿದರೆ, ಜ್ಞಾನಿಯಾಗಿ (ಇಂದೂವಾಗಿ) ಬದಲಾಗಿ ಹೋಗುತ್ತಾನೆ. ನಂತರ ಮೂರು ದೈವ ಗ್ರಂಥಗಳಲ್ಲಿನ ಜ್ಞಾನವನ್ನು ತಿಳಿಯಲ್ಪಟ್ಟರೆ ಇಂದೂವಿನಿಂದ ಯೋಗಿಯಾಗಿ ಬದಲಾಗಿ ಹೋಗುತ್ತಾನೆ. ಯೋಗಿಯಾಗಿ ಬದಲಾದವನು ಮೂರು ದೈವ ಗ್ರಂಥಗಳಲ್ಲಿನ

ಸಾರಾಂಶವನ್ನು ಪೂರ್ತಿಯಾಗಿ ತಿಳಿದಿರುತ್ತಾನೆ. ಹಾಗೆಂದು ಆತನು ಮೂರು ಗ್ರಂಥಗಳಲ್ಲಿನ ವಿಷಯಗಳು ಕಂಠಾಪಾಠವಾಗಿ ಹೇಳುತ್ತಾನೆಂದು ಅಂದು ಕೊಳ್ಳಬಾರದು. ಜ್ಞಾನಭಾವಗಳು ತಿಳಿದಿರುತ್ತವೆ ಆದರೆ, ಏನನ್ನಾದರೂ ಬಾಯಿಗೆ ಹೇಳುವ ಜ್ಞಾಪಕಶಕ್ತಿ ಇರುತ್ತದೆಂದು ಅಂದುಕೊಳ್ಳಬಾರದು. ಏನನ್ನಾದರೂ ವಿವರಿಸಿ ಹೇಳುವ ಜ್ಞಾನಶಕ್ತಿ ಹೊಂದಿರುತ್ತಾನೆಂದು ತಿಳಿಯಬೇಕು.

ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ಮೂವರು ಪುರುಷರ ವಿಷಯ ಇದೆ. ಮೂವರು ಪುರುಷರಲ್ಲಿ ಕ್ಷರನು, ಅಕ್ಷರನು ಎನ್ನುವವರು ಇಬ್ಬರು ಕಲೆತಿರುತ್ತಾರೆ. ಕ್ಷರನು, ಅಕ್ಷರನು ಎನ್ನುವ ಇಬ್ಬರು ಅಲ್ಲದೆ ಮೂರನೆಯ ಪುರುಷನಾದ ಪುರುಷೋತ್ತಮನೆನ್ನುವವನು ಪತ್ಯೇಕವಾಗಿ ಇರುತ್ತಾನೆ. ಪುರುಷೋತ್ತಮನೆಂಬ ಮೂರನೆಯ ಪುರುಷನು ಮೂರುಲೋಕಗಳಲ್ಲಿ ವ್ಯಾಪಿಸಿರುತ್ತಾನೆ. ವಿವರವಾಗಿ ಹೇಳಿಕೊಂಡರೆ ಕ್ಷರನೆಂಬ ಒಂದನೆಯದು ಪ್ರತಿ ಮನುಷ್ಯನಲ್ಲಿರುವ ಜೀವಾತ್ಮ ಎಂದೂ, ಅಕ್ಷರನೆಂಬ ಎರಡನೆಯದು ಜೀವಾತ್ಮದೊಂದಿಗೆ ಸೇರಿ ಶರೀರದಲ್ಲಿರುವ ಆತ್ಮ ಎಂದೂ, ಪುರುಷೋತ್ತಮನೆಂಬ ಮೂರನೆಯದು ಕ್ಷರನು, ಅಕ್ಷರನಿಗಿಂತ ಬೇರೆಯಾಗಿದ್ದು, ಶರೀರದಲ್ಲಿಯೇ ಅಲ್ಲದೆ ವಿಶ್ವವೆಲ್ಲಾ ವ್ಯಾಪಿಸಿದೆ. ಈ ಮೂರು ಆತ್ಮಗಳ ವಿಷಯ ಸಾಧಾರಣವಾಗಿ ಯಾರಿಗು ಅರ್ಥವಾಗಲಿಲ್ಲ. ವಿವರವಾಗಿ ಹೇಳಿಕೊಂಡರೆ ಕ್ಷರಾತ್ಮ ಅಂದರೆ ನಾಶವಾಗುವವನೆಂದು ಅರ್ಥ. ಎಂದಿಗಾದರೂ ಜೀವಿಯು ನಶಿಸಿ ದೇವರಾಗಿ ಬದಲಾಗಬೇಕಾಗಿದ್ದೇ, ಆದ್ದರಿಂದ ಶರೀರದಲ್ಲಿ ಜೀವನಾಗಿರುವ ಪ್ರತಿ ಒಬ್ಬನು ಕ್ಷರಾತ್ಮನಾಗಿಯೇ ಇದ್ದಾನೆ. ಅಕ್ಷರನು ಎಂದರೆ ನಾಶ ಇಲ್ಲದವನೆಂದು ಅರ್ಥ. ಪ್ರತಿ ಶರೀರದಲ್ಲಿ ಜೀವಾತ್ಮದಜೊತೆ ಅವನೊಂದಿಗೆ ಬೆರೆತು ಶರೀರವೆಲ್ಲಾ ವ್ಯಾಪಿಸಿರುವ ಆತ್ಮವನ್ನು ಎಲ್ಲರನ್ನು ನಡೆಸುವ ಆತ್ಮ ಎನ್ನುತ್ತಿದ್ದೇವೆ. ಇನ್ನೂ ಮೂರನೆಯ ಆತ್ಮ ಎರಡು ಆತ್ಮಗಳಾದ ಕ್ಷರಾಕ್ಷರರು ಎನ್ನುವವರಿಗಿಂತ ಉತ್ತಮನು ಆಗಿರುವುದರಿಂದ ಮೂರನೆಯ ಆತ್ಮವನ್ನು ಪುರುಷೋತ್ತಮನು ಎನ್ನುತ್ತಿದ್ದೇವೆ. ಪುರುಷೋತ್ತಮನನ್ನೇ ಪರಮಾತ್ಮ ಎಂದೂ,

ದೇವರು ಎಂದೂ ಅನ್ನುತ್ತಿದ್ದೇವೆ. ಪರಮಾತ್ಮ ಎನ್ನುವುದು ವಿಶ್ವವೆಲ್ಲಾ ವ್ಯಾಪಿಸಿರುವುದೇ ಅಲ್ಲದೆ, ಎಲ್ಲರ ಶರೀರಗಳಲ್ಲಿ ಸಹ ಆವಹಿಸಿದೆ. ಈ ವಿಧವಾಗಿ ಶರೀರದಲ್ಲಿ ಮೂರು ಆತ್ಮಗಳಿವೆಯೆಂಬ ವಿಷಯ ಯಾರಿಗೂ ತಿಳಿಯದು.

ಶರೀರದಲ್ಲಿರುವ ಆತ್ಮಗಳು ಪುರುಷ ಸಂಬಂಧವಾದವುಗಳಾದರೆ, ಶರೀರವು ಪ್ರಕೃತಿ ಸಂಬಂಧವಾದುದು. ಸೃಷ್ಟಿಗೆ ಪೂರ್ವದಲ್ಲಿ ದೇವರು ವಿಶ್ವವನ್ನು ಸೃಷ್ಟಿಸಬೇಕೆಂಬ ಆಲೋಚನೆಯಿಂದ ಮೊದಲು ತನ್ನನ್ನು ನಾಲ್ಕು ಭಾಗಗಳಾಗಿ ವಿಭಜಿಸಿಕೊಂಡಿದ್ದಾನೆ. ಅದರಲ್ಲಿ ಒಂದು ಭಾಗ ಪ್ರಕೃತಿಯಾಗಿದ್ದು, ಉಳಿದ ಮೂರು ಭಾಗಗಳು ಮೂರು ಆತ್ಮಗಳಾಗಿ ಇವೆ. ಪ್ರಕೃತಿಯನ್ನು ಸ್ತ್ರೀ ತತ್ತ್ವವಾಗಿ, ಮೂರು ಆತ್ಮಗಳನ್ನು ಪುರುಷ ತತ್ತ್ವವಾಗಿ ವಿಭಜಿಸಿಕೊಂಡ ದೇವರು ಆತ್ಮಗಳಲ್ಲಿ ಮೂರನೆಯದಾದ ಪುರುಷೋತ್ತಮ ಎನ್ನುವ ಮೂರನೆಯ ಆತ್ಮವಾಗಿ ತಾನು ಇದ್ದೂ, ಉಳಿದ ಎರಡನ್ನು ಶರೀರದಲ್ಲಿ ಇರುವ ಹಾಗೆ ಮಾಡಿ, ಮೊದಲನೆಯದಾದ ಜೀವಾತ್ಮವನ್ನು ನಡೆಸಲ್ಪಡುವವನಾಗಿ, ಎರಡನೆಯವನಾದ ಆತ್ಮ ನಡೆಸುವುದಾಗಿ ಇರುವಂತೆ ದೇವರೇ ಮಾಡಿದ್ದಾನೆ. ಶರೀರದಲ್ಲಿ ನಡೆಸುವ ಆತ್ಮ, ಇಲ್ಲವೆ ನಡೆಸುವ ಆತ್ಮ ಅಕ್ಷರನಾಗಿದ್ದು, ನಡೆಯಲ್ಪಡುವವನು ಅಥವಾ ಓಡಿಸಲ್ಪಡುವವನು ಕ್ಷರನಾದ ಜೀವಿಯಾಗಿದ್ದಾನೆ. ಈ ಮೂರು ಆತ್ಮಗಳನ್ನು ಕುರಿತು ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ ಹೇಳುವುದೇ ಅಲ್ಲದೆ, ಉಳಿದ ಸಂದರ್ಭಗಳಲ್ಲಿ ಅನೇಕಬಾರಿ ಹೇಳುವುದು ನಡೆದಿದೆ. ಈ ವಿಧವಾಗಿ ದೇವರು ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಈ ವಿಷಯ ಭಗವದ್ಗೀತೆಯಲ್ಲಿ ಎಷ್ಟೋ ವಿವರವಾಗಿದ್ದರೂ, ಹಿಂದೂಗಳು ತಿಳಿಯಲಾರದೆ ಹೋಗಿದ್ದಾರೆ.

ದ್ವಿತೀಯ ದೈವ ಗ್ರಂಥವಾದ ಬೈಬಲ್ ಮತ್ತಾಯ ಎನ್ನುವ ಸುವಾರ್ತೆಯಲ್ಲಿ 28ನೇ ಅಧ್ಯಾಯದಲ್ಲಿ 19ನೇ ವಾಕ್ಯದಲ್ಲಿ ತಂದೆ, ಕುಮಾರನು, ಪರಿಶುದ್ಧಾತ್ಮ ಎನ್ನುವ ಮೂವರನ್ನು ಕುರಿತು ಹೇಳಿದ್ದಾನೆ. ಭಗವದ್ಗೀತೆಯಲ್ಲಿ ಹೇಳಿದ ಮೂವರು ಪುರುಷರನ್ನು ಕುರಿತು ಬೈಬಲ್‌ನಲ್ಲಿ ಸಹ ಹೇಳಲಾಗಿದೆ. ಆದರೆ ಗೀತೆಯಲ್ಲಿ

ಕ್ಷರಾಕ್ಷರ ಪುರುಷೋತ್ತಮರೆಂದು ಹೇಳಿರುವಾಗ, ಬೈಬಲ್‌ನಲ್ಲಿ ಸ್ವಲ್ಪ ಬದಲಾವಣೆ ಯಿಂದ ಅಕ್ಷರ ಕ್ಷರ ಪುರುಷೋತ್ತಮ ಎಂದು ಹೇಳಲಾಗಿದೆ. ಕ್ಷರನು, ಅಕ್ಷರನು, ಪುರುಷೋತ್ತಮನಾಗಿ ಹೇಳಿದ ಮೂವರು ಪುರುಷರನ್ನು, ಬೈಬಲ್ ಗ್ರಂಥದಲ್ಲಿ ಅಕ್ಷರನು, ಕ್ಷರನು, ಪುರುಷೋತ್ತಮನೆಂದು ಕ್ರಮವನ್ನು ಬದಲಾಯಿಸಿ ಹೇಳಿದ್ದಾನೆ. ತಂದೆ ಅಕ್ಷರನಾಗಿದ್ದು, ಕುಮಾರನು ಕ್ಷರನಾಗಿದ್ದಾನೆ. ಉಳಿದ ಪರಿಶುದ್ಧಾತ್ಮ ಪರಮಾತ್ಮನಾಗಿದ್ದಾನೆ. ಈ ವಿಧವಾಗಿ ಸ್ವಲ್ಪ ಹೆಸರುಗಳು, ಸ್ವಲ್ಪ ವರಸೆಕ್ರಮ ಬದಲಾಯಿಸಿ ಹೇಳಿರುವುದರಿಂದ, ಭಗವದ್ಗೀತೆಯಲ್ಲಿ ಹೇಳಿದ ವಿಧಾನವೇ ಬೈಬಲ್‌ನಲ್ಲಿ ಹೇಳಲಾಗಿದೆಯೆಂದು ತಿಳಿಯುತ್ತಿದೆ. ಭಗವದ್ಗೀತೆಯಲ್ಲಿ ಕ್ಷರಾಕ್ಷರರು ಅಂದರೆ ಜೀವಾತ್ಮ ಆತ್ಮ ಇಬ್ಬರೂ ಸೇರಿ ಕೂಟಸ್ಥರಾಗಿ ಒಂದೇ ಶರೀರದಲ್ಲಿ ಇದ್ದಾರೆಂದು ಹೇಳಿದಹಾಗೆ, ಬೈಬಲ್‌ನಲ್ಲಿ ತಂದೆ ಕುಮಾರನಾಗಿ ಹೇಳುವ ಈ ಎರಡು ಆತ್ಮಗಳು ಕಲೆತಿವೆಯೆಂದು, ಯೋಹಾನು ಸುವಾರ್ತೆ 10ನೇ ಅಧ್ಯಾಯ 30ನೇ ವಚನದಲ್ಲಿ **"ನಾನೂ ತಂದೆಯೂ ಏಕವಾಗಿ ಇದ್ದೇವೆ"** ಎಂದೂ, ಯೋಹಾನು ಸುವಾರ್ತೆ 14ನೇ ಅಧ್ಯಾಯದಲ್ಲಿ 10ನೇ ವಾಕ್ಯದಲ್ಲಿ **"ತಂದೆಯಲ್ಲಿ ನಾನೂ, ನನ್ನಲ್ಲಿ ತಂದೆಯೂ ಇದ್ದೇವೆಂದು ನೀನು ನಂಬುತ್ತಿಲ್ಲವಾ?"** ಎಂದೂ ಇದೆ. ಜೀವಾತ್ಮನಾಗಿ ಯೇಸು ಇದ್ದೂ ತನ್ನನ್ನು ಜೀವಾತ್ಮನಾಗಿ ಸರಿಹೋಲಿಸಿ ಕುಮಾರನಾಗಿ ಹೇಳಿಕೊಂಡಿದ್ದಾನೆಂದು ತಿಳಿಯಬೇಕು. ಭಗವದ್ಗೀತೆಯಲ್ಲಿ ಆತ್ಮನಾಗಿ, ಜೀವಾತ್ಮನಾಗಿ ಹೇಳುತ್ತಾ ಎರಡು ಆತ್ಮಗಳು ಸೇರಿ ಕೂಟಸ್ಥವಾಗಿವೆ ಯೆಂದು ಹೇಳಿರುವಾಗ, ಬೈಬಲ್‌ನಲ್ಲಿ ತಂದೆಯಾಗಿ ಕುಮಾರನಾಗಿ ಎರಡು ಆತ್ಮಗಳು ಸೇರಿ ಏಕವಾಗಿ ಇವೆಯೆಂದು ಹೇಳಿದ್ದಾರೆ. ಭಗವದ್ಗೀತೆಯಲ್ಲಿ ಜೋಡಿ ಆತ್ಮಗಳಾಗಿ ಜೀವಾತ್ಮ ಆತ್ಮಗಳಿವೆಯೆಂದು ಹೇಳಿದಾಗ, ಬೈಬಲ್‌ನಲ್ಲಿ ಸಹ ತಂದೆ ಕುಮಾರನು ಇಬ್ಬರೂ ಕಲೆತಿದ್ದಾರೆಂದು ಹೇಳುವುದಾಗಿದೆ. ಭಗವದ್ಗೀತೆ ಯಲ್ಲಾಗಲಿ, ಬೈಬಲ್‌ನಲ್ಲಾಗಲಿ ಹೇಳಿದ ವಿಷಯ ಒಂದೇ ಆದರೂ, ಹೆಸರುಗಳು ಬದಲಾಯಿಸಿ ಮುಂದಿನದು ಹಿಂದಕ್ಕೆ, ಹಿಂದಿನದು ಮುಂದೆ ಹೇಳುವುದರಿಂದ, ಎರಡು ಗ್ರಂಥಗಳಲ್ಲಿ ಒಂದೇ ಸಮಾಚಾರವನ್ನು ಹೇಳಿದ್ದಾರೆಂದು ಯಾರೂ

ಗುರುತಿಸಲಾರದೆ ಹೋಗಿದ್ದಾರೆ. ಭಗವದ್ಗೀತೆಯಲ್ಲಿ ಮೂರನೆಯ ಆತ್ಮವನ್ನು ಪುರುಷೋತ್ತಮನೆಂದು, ಪರಮಾತ್ಮಯೆಂದು ಹೇಳಿರುವಾಗ, ಬೈಬಲ್‌ನಲ್ಲಿ ಪರಿಶುದ್ಧಾತ್ಮಯೆಂದು ಹೇಳುವುದಾಗಿದೆ. ಪರಮಾತ್ಮನೇ ಪರಿಶುದ್ಧಾತ್ಮ ಎಂದು ಹೇಳಿದಾಗ ಅದನ್ನೂ ಸಹ ಇತ್ತ ಹಿಂದೂಗಳಾಗಲಿ, ಅತ್ತ ಕ್ರೈಸ್ತವರಾಗಲಿ ಗುರುತಿಸಲಾರದೆ ಹೋಗಿದ್ದಾರೆ. ಈ ವಿಧವಾಗಿ ಎರಡು ಗ್ರಂಥಗಳಲ್ಲಿನ ಆತ್ಮಗಳ ವಿವರವನ್ನು ಎರಡು ಮತದವರು ತಿಳಿಯಲಾರದೆ ಹೋಗಿದ್ದಾರೆ. ಇಲ್ಲಿಯವರೆಗು ತಂದೆ ಯಾರೋ ಕ್ರೈಸ್ತವರಿಗೆ ತಿಳಿಯದು. ಹಾಗೆಯೇ ಆತ್ಮ ಯಾರೋ ಹಿಂದೂಗಳಿಗೆ ತಿಳಿಯದು.

ಅಂತಿಮ ದೈವ ಗ್ರಂಥವಾದ ಖುರ್‌ಆನಲ್ಲಿ ಖಾಫ್ ಸೂರಾ (50), ಆಯತ್ 21ರಲ್ಲಿ **"ಪ್ರತಿ ವ್ಯಕ್ತಿ ತನ್ನಹಿಂದೆ ಒಬ್ಬ ನಡೆಸುವವನು, ಒಬ್ಬ ಸಾಕ್ಷಿ ಹೇಳುವವನು ಇರುವ ಸ್ಥಿತಿಯಲ್ಲಿ ಬರುತ್ತಾನೆ"** ಎಂದು ಇದೆ. ಈ ವಾಕ್ಯವನ್ನು ನೋಡಿದರೆ ಇದು ಭಗವದ್ಗೀತೆಯಲ್ಲಿ ಹೇಳಿದ ಕ್ಷರಾಕ್ಷರ ಪುರುಷೋತ್ತಮರನ್ನು ಕುರಿತು ಹೇಳಿರುವುದೆಂದು ಯಾರಾದರೂ ಗುರುತು ಹಿಡಿಯುತ್ತಾರಾ? ಗುರುತು ಹಿಡಿದರೂ ಹಿಡಿಯದೇ ಹೋದರೂ ನಿಜಕ್ಕೂ ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಹೇಳಿದ ಸಮಾಚಾರವೇ ಈ ವಾಕ್ಯದಲ್ಲಿ ಇದೆ. ಭಗವದ್ಗೀತೆಯಲ್ಲಿ ಮೂವರು ಪುರುಷರಾಗಿ ಹೇಳಿದವರೇ ಬೈಬಲ್ ಗ್ರಂಥದಲ್ಲಿ ತಂದೆ, ಮಗ, ಪರಿಶುದ್ಧಾತ್ಮ ಎಂದು ಹೇಳಿ, ಸ್ವಲ್ಪ ಗಲಿಬಿಲಿ ಮಾಡಿ ಮೊದಲ ಗ್ರಂಥದಲ್ಲಿನ ಸಾರಾಂಶವೇ ಎರಡನೇ ಗ್ರಂಥದಲ್ಲಿ ಇದೆಯೆಂದು ಸುಲಭವಾಗಿ ಯಾರೂ ಗುರುತು ಹಿಡಿಯದಂತೆ ಹೇಳುವುದು ನಡೆದಿದೆ. ಮೂರನೆಯ ಗ್ರಂಥವಾದ ಖುರ್‌ಆನಲ್ಲಿ ನಡೆಸುವವನು, ನಡೆಸಲ್ಪಡುವವನು, ನೋಡುವವನು ಎಂದು ಹೇಳುವುದರಿಂದ ಮೂರು ಗ್ರಂಥಗಳಲ್ಲಿ ಒಂದೇ ವಿಷಯ ಇದೆಯೆಂದು ಸುಲಭವಾಗಿ ತಿಳಿಯುವುದಕ್ಕೆ ಅವಕಾಶ ಇಲ್ಲದಂತೆ ಹೋಗಿದೆ. ನಿನ್ನ ಜ್ಞಾನ ನಮಗೆ ಅರ್ಥವಾಗಬೇಕೆಂದು ಕೋರಿಕೊಂಡು ನೋಡಿದರೆ, ಮೂರು ಗ್ರಂಥಗಳಲ್ಲಿಯೂ ಮೂರು ವಿಧಗಳಾಗಿ ಕಾಣಿಸುವ ಮೂರು ವಾಕ್ಯಗಳು

ಒಂದೇ ಸಾರಾಂಶವನ್ನು ಬೋಧಿಸುತ್ತಿವೆಯೆಂದು ತಿಳಿಯಬಲ್ಲದು. ಭಗವದ್ಗೀತೆ ಯಲ್ಲಿಯೂ ಬೈಬಲ್‌ನಲ್ಲಿಯೂ ಮೊದಲು ಇಬ್ಬರೂ ಕಲೆತಿದ್ದಾರೆಂದು, ಮೂರನೆಯವನು ಪ್ರತ್ಯೇಕವಾಗಿ ಇದ್ದಾನೆಂದು ತಿಳಿದುಹೋಗಿದೆ. ಇಲ್ಲಿ ಖುರ್‌ಆನ್ ಗ್ರಂಥದಲ್ಲಿ ಸಹ ಮೊದಲು ಇಬ್ಬರು ಒಂದುಕಡೆ ಇದ್ದು ಒಬ್ಬರಿಗೊಬ್ಬರು ಸಂಬಂಧ ಹೊಂದಿರುವಂತೆ ತಿಳಿಯುತ್ತಿದೆ. ನಡೆಸುವವನು ಆತ್ಮ, ನೆಡೆಸಿಕೊಳ್ಳು ವವನು ಜೀವಾತ್ಮ ಎಂದು ತಿಳಿದುಹೋಗುತ್ತಿದೆ. ಶರೀರಕ್ಕೆಲ್ಲ ಅಧಿಕಾರಿಯಾಗಿ, ಶರೀರವೆಲ್ಲಾ ವ್ಯಾಪಿಸಿ ಎಲ್ಲಾ ಅವಯವಗಳನ್ನು ಆಡಿಸಿ ಕೆಲಸ ಮಾಡಿಸುವುದು ಆತ್ಮವೇ ಎಂದು ಭಗವದ್ಗೀತೆಯಲ್ಲಿ ಹೇಳಿಕೊಂಡಿದ್ದಾರೆ. ಅದೇ ವಿಧವಾಗಿ ನಿತ್ಯವು, ಪ್ರತಿನಿಮಿಷ, ಕ್ಷಣಕ್ಷಣವು ಮನುಷ್ಯನನ್ನು ತನ್ನ ಚೈತನ್ಯದಿಂದ ನಡೆಸುವುದು ಆತ್ಮವೇ ಆಗಿರುವುದರಿಂದ ಇಲ್ಲಿ ನಡೆಸುವವನು ಎಂದು ಹೇಳುತ್ತಲೇ ಆತನನ್ನು ಆತ್ಮವಾಗಿ, ಎರಡನೆಯ ಪುರುಷನಾದ ಅಕ್ಷರನನ್ನಾಗಿ ಲೆಕ್ಕಿಸಿಕೊಳ್ಳಬಹುದು. ನಡೆಸಲ್ಪಡುವವನು ಜೀವಾತ್ಮಯೆಂದು ಅಥವಾ ಕ್ಷರ ಪುರುಷನಾದ ಮೊದಲ ಪುರುಷನೆಂದು ತಿಳಿಯುತ್ತಿದೆ. ಪಕ್ಕದಲ್ಲಿದ್ದು ಸಾಕ್ಷಿಯಾಗಿ ನೊಡುವವನನ್ನು ಮೂರನೆಯ ಪುರುಷನಾದ ಪರಮಾತ್ಮನಾಗಿ ಲೆಕ್ಕಿಸಬಹುದು. ಈ ವಿಧವಾಗಿ ಮೂರು ವಿಧಗಳಾಗಿ ಮೂರು ಗ್ರಂಥಗಳಲ್ಲಿ ಹೇಳಿದ ಮೂರು ಸಮಾಚಾರಗಳನ್ನು ಒಂದೇ ಜ್ಞಾನವಾಗಿ ಗುರುತಿಸಬಹುದು.

ನಾವು ಮೊದಲೆ ಹೇಳಿದ್ದೇವೆ ಸಂಪೂರ್ಣ ಜ್ಞಾನಿಯಾದವನು ಯೋಗಿ ಯಾಗಿ ಬದಲಾಗುತ್ತಾನೆ ಎಂದೂ, ಯೋಗಿಯಾಗಿ ಬದಲಾದವನು ಮೂರು ಗ್ರಂಥಗಳಲ್ಲಿನ ದೈವ ವಿಷಯಗಳನ್ನು ಗುರುತಿಸುತ್ತಾನೆ ಎಂದೂ ಹೇಳಿದ್ದೇವೆ. ಹಾಗೆ ಗ್ರಂಥಗಳಲ್ಲಿ ದೈವ ವಿಷಯಗಳಂತೆ ಮನುಷ್ಯರು ಹೇಳಿದ ಅಜ್ಞಾನ ವಿಷಯಗಳು ಬೆರೆತಿದ್ದರೆ, ಅವುಗಳನ್ನು ಸಹ ಗುರುತಿಸುತ್ತಾನೆಂದು ಹೇಳಿದ್ದೇವೆ. ದೈವ ಗ್ರಂಥಗಳೆಂಬ ಮೂರು ಗ್ರಂಥಗಳಲ್ಲಿ ಜ್ಞಾನವೇ ಅಲ್ಲದೆ ಮಧ್ಯದಲ್ಲಿ ಕಲೆತಿರುವ ಅಜ್ಞಾನ ಕಾಲುಷ್ಯ ಸಹ ಸ್ವಲ್ಪ ಇದೆಯೆಂದು ತಿಳಿದಿದೆ. ಆದರೆ ಕೆಲವರು ಮನುಷ್ಯರು ಮತ್ತೆ ಕೆಲವರು ಬೋಧಕರು ಕಾಲುಷ್ಯವಾದ ಅಜ್ಞಾನ

ವಿಷಯಗಳನ್ನೇ ತೆಗೆದುಕೊಂಡು ಹೇಳಿಕೊಳ್ಳುತ್ತಿದ್ದಾರೆ. ಅಂತಹವರು ಯಾರು ಹೇಳಿದರೂ ಕೇಳುವುದಿಲ್ಲ. ಅವರಿಗೆ ದೇವರೇ ಆ ವಿಧವಾಗಿ ತೀರ್ಪು ತೀರ್ಮಾನಿಸಿರುತ್ತಾನೆ. ಆದ್ದರಿಂದ ಅವರು ದೈವ ಮಾರ್ಗದಲ್ಲಿ ಇದ್ದೇವೆಂದು ಕೊಂಡು ಅಜ್ಞಾನ ಮಾರ್ಗದಲ್ಲಿ ಹೋಗುತ್ತಿರುತ್ತಾರೆ. ಅಂತಹವರಿಗೆ ಜ್ಞಾನ ವಿಷಯಗಳು ಸಹ ಬೇರೆ ವಿಧವಾಗಿ ಅರ್ಥವಾಗುತ್ತಿರುತ್ತವೆ. ಅಂತಹವರನ್ನು ಅವರ ಕರ್ಮಕ್ಕೆ ಬಿಟ್ಟು, ಕೊನೆಯದಾಗಿ ನಾವು ಒಂದು ವಿಷಯವನ್ನು ಹೇಳಿ ಕೊಳ್ಳೋಣ. ನಾವು ಹೇಳುವ ವಿಷಯವನ್ನು ನೋಡಿದ ನಂತರ ಅಲ್ಲಿಯವರೆಗು ಬಾರದ ಪ್ರಶ್ನೆಗಳು ಕೆಲವರಿಗೆ ಬಂದು, ಅದರ ಉತ್ತರಕ್ಕೋಸ್ಕರ ಪ್ರಯತ್ನಿಸಿ, ಕೊನೆಗೆ ಉತ್ತರವನ್ನು ತಿಳಿದುಕೊಂಡು, ಅದರಮೂಲಕ ಸ್ವಲ್ಪ ಜ್ಞಾನಿಗಳಾಗಿ ಬದಲಾಗುವುದಕ್ಕೆ ಅವಕಾಶವಿದೆ. ಆದ್ದರಿಂದ ಪ್ರಶ್ನೆ ಬರುವ ಒಂದು ವಿಷಯವನ್ನು ತೆಗೆದುಕೊಳ್ಳೋಣ.

ಬೈಬಲ್ ಗ್ರಂಥದಲ್ಲಿ ಯೋಹಾನು ಸುವಾರ್ತೆ 8ನೇ ಅಧ್ಯಾಯದಲ್ಲಿ 16ನೇ ವಚನದಲ್ಲಿ ಈ ವಿಧವಾಗಿ ಇದೆ. **"ನಾನು ಒಬ್ಬನಾಗಿ ಇರದೆ ನಾನೂ, ನನ್ನನ್ನು ಕಳಿಸಿದ ತಂದೆಯೂ ಸಹ ಇದ್ದೇವೆ. ಆದ್ದರಿಂದಲೆ ನಾನು ತೀರ್ಪು ಕೊಟ್ಟರು ನನ್ನ ತೀರ್ಪು ಸತ್ಯವೇ."** ಎಂದು ಯೇಸು ಹೇಳಿದಾಗ ಅಲ್ಲಿರುವವರು ಆತನ ತಂದೆಯನ್ನು ಕುರಿತು ಕೇಳಿದ್ದಾರೆ (ಯೋಹಾನು 8. 19) **"ನಿನ್ನ ತಂದೆ ಎಲ್ಲಿದ್ದಾನೆಂದು ಆತನನ್ನು ಕೇಳಿದಾಗ, ಯೇಸು ನೀವು ನನ್ನನ್ನಾದರೂ, ನನ್ನ ತಂದೆಯನ್ನಾದರೂ ತಿಳಿಯಲಾರರು. ನನ್ನನ್ನು ತಿಳಿದುಕೊಂಡರೇ ನನ್ನ ತಂದೆಯನ್ನು ಸಹ ತಿಳಿದಿರುತ್ತೀರೆಂದು ಅವರ ಹತ್ತಿರ ಹೇಳಿದನು"** ಈ ವಾಕ್ಯವನ್ನು ನೋಡಿದ್ದೀರಲ್ಲವೇ! ಶರೀರದಿಂದ ತಿರುಗುವ

ಯೇಸುನನ್ನು ನೋಡಿದವರೊಂದಿಗೆಯೇ ಆತನು ನೀವು ನನ್ನನ್ನು ನೋಡಿದ್ದರೇ, ನನ್ನ ತಂದೆಯನ್ನು ಸಹ ನೋಡಿರುತ್ತೀರಾ ಎಂದು ಅಂದಿದ್ದಾರಲ್ಲವೆ! ಒಂದುವೇಳೆ ಅಲ್ಲಿರುವವರು ನಾವು ನಿನ್ನನ್ನು ನೋಡುತ್ತಿದ್ದೇವೆ ಅಂದರೆ ಆಗ ಯೇಸು "ನನ್ನನ್ನು ನೋಡಿದಾಗ ನನ್ನ ತಂದೆಯನ್ನು ಸಹ ನೋಡಿರುತ್ತೀರಲ್ಲವೆ! ಅಂತಹದರಲ್ಲಿ ನನ್ನ ತಂದೆ ಯಾರು ಎಂದು ಏಕೆ ಕೇಳುತ್ತಿದ್ದೀರೆಂದು" ಕೇಳಬಲ್ಲನು. ಆದರೆ ತಂದೆ ಕುಮಾರನು ಎಂದು ಹೇಳಿದಾಗ ಯಾರಾದರೂ ಸ್ಥೂಲವಾಗಿ ಕಾಣಿಸುವವರನ್ನೇ ಲೆಕ್ಕಿಸಿರುತ್ತಾರೆ. ಯೇಸು ತಂದೆ ಎಲ್ಲಿದ್ದಾನೊ ತಿಳಿಯದಾಗಲಿ, ಎದುರಿಗಿರುವ ಯೇಸು ತಿಳಿದಿದ್ದಾನೆಂದು ಅಲ್ಲಿರುವವರು ಹೇಳಬಲ್ಲರು. ಯೇಸುಪ್ರಭು ಫೋಟೊ ನೋಡಿದ ನಾವಾದರೂ ನಾವು ಯೇಸುವನ್ನು ಫೋಟೋದಲ್ಲಿ ನೋಡಿದ್ದೇವೆಂದು ಹೇಳುತ್ತೇವೆ. ಆದರೆ ಈಗ ಯೇಸು ಹೇಳಿದ ಮಾತುಗಳಲ್ಲಿ ನನ್ನನ್ನಾಗಲಿ, ನನ್ನ ತಂದೆಯನ್ನಾಗಲಿ ನೋಡಲಾರರು ಅಂದರೆ! ಆಗ ಯಾರಿಗಾದರೂ ಕಾಣಿಸುವ ಮನುಷ್ಯ ಯೇಸು ಅಲ್ಲವೆ! ಎಂದು ಪ್ರಶ್ನೆ ಬರುತ್ತದೆ.

ನಾವು ಸ್ವಲ್ಪ ವಿವರವಾಗಿ ಹೇಳಿಕೊಂಡರೆ ತಂದೆ ಅಂದರೆ ಹುಟ್ಟಿಸುವವನು ಎಂದೂ, ಕುಮಾರನು ಅಂದರೆ ಹುಟ್ಟಿದವನು ಎಂದೂ ಅರ್ಥ. ಮಗ ಇದ್ದರೆ ತಂದೆ ಇರುತ್ತಾನೆ. ಮಗ ಹೇಗಿದ್ದರೆ ತಂದೆ ಸಹ ರೂಪದಲ್ಲಿ ಸ್ವಲ್ಪ ಅಲ್ಪಸ್ವಲ್ಪ ಮಗನ ಹಾಗೆ ಇರುತ್ತಾನೆ. ಆದರೆ ಈಗ ಎಲ್ಲರಿಗೂ ಕಾಣಿಸುವ ಯೇಸು ನೀವು ಯಾರೂ ನನ್ನನ್ನು ನೋಡಲಾರರು ಅಂದಿದ್ದಾನೆ. ಹಾಗೆ ಅಂದಾಗ ಈತನು ಕಾಣಿಸುವ ಮನುಷ್ಯನೇ ಅಲ್ಲವೆ! ನನ್ನನ್ನು ನೋಡಲಾರರು ಅನ್ನುತ್ತಾನೇನು? ಎಂದು ಯಾರಿಗಾದರೂ ಪ್ರಶ್ನೆ ಬರುತ್ತದೆ. ಯೇಸು ತನ್ನನ್ನು ನೋಡಲಾರರು ಅಂದರೆ ಆತನು ಕಾಣಿಸುವ ಶರೀರವಲ್ಲ, ಕಾಣಿಸದ ಜೀವಾತ್ಮಯೆಂದು ಅರ್ಥವಾಗುತ್ತಿದೆ. ಹಾಗೆಯೇ ತಂದೆ ಎಂದು ಕರೆಯಲ್ಪಡುವವನು ಸಹ ಕಾಣಿಸದ ಆತ್ಮ ಎಂದು ತಿಳಿಯುತ್ತಿದೆ. ಆತ್ಮ ಯಾವಾಗಲೂ ಶರೀರವನ್ನು ಜೀವಾತ್ಮವನ್ನು ಆಕ್ರಮಿಸಿ ಎಲ್ಲಾ ಕೆಲಸಗಳು ಮಾಡುತ್ತಿದೆ.

ಶರೀರದೊಳಗೆ ಕದಲಿಸುವ ಶಕ್ತಿಯಾಗಿದ್ದು ಕದಲಿಸುತ್ತಾ ಎಲ್ಲಾ ಕೆಲಸಗಳನ್ನು ಆತ್ಮವೇ ಮಾಡುವುದರಿಂದ, ಆ ವಿಷಯ ತಿಳಿದ ಯೇಸು ನಾನು ಮಾತನಾಡುವ ಮಾತು ನನ್ನದು ಅಲ್ಲ ನನ್ನ ತಂದೆಯದು ಅಂದಿದ್ದಾನೆ. ಹಾಗೆಯೇ ಕೆಲವು ಸಂದರ್ಭಗಳಲ್ಲಿ **"ನಾನು ಮಾಡುವ ಪ್ರತಿ ಕ್ರಿಯೆ ನನ್ನ ತಂದೆ ಆಜ್ಞೆಯಿಂದ ಮಾಡಿರುವುದೇ ಹೊರತು ನಾನು ಸ್ವತಃವಾಗಿ ಮಾಡಲಿಲ್ಲ"** ಅಂದಿದ್ದಾನೆ. ಪ್ರತಿ ವಿಷಯದಲ್ಲಿ ತನ್ನಮೇಲೆ ಏನನ್ನು ಇಟ್ಟುಕೊಳ್ಳದೆ ಎಲ್ಲವೂ ತಂದೆಯಿಂದಲೇ ನಡೆಯುತ್ತಿದೆಯೆಂದು ಹೇಳಿದ್ದಾನೆ ಅಂದರೆ ಕಾಣಿಸದ ತಂದೆ ಸಹ ಯೇಸುನೊಂದಿಗೆ ಶರೀರದಲ್ಲಿದ್ದಾನೆಂದು ತಿಳಿಯುತ್ತಿದೆ. ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹೇಳಿದಹಾಗೆ ಆತ್ಮ ಜೀವಾತ್ಮಗಳ ವಿಷಯ ಇದೆ. ಪರಮಾತ್ಮ, ಆತ್ಮ, ಜೀವಾತ್ಮಗಳಿಗಿಂತ ಬೇರೆಯಾಗಿದ್ದು ಏನೂ ಮಾಡದೆ ಇದ್ದಾನಾದ್ದರಿಂದ, ಯಾವ ವಿಷಯದಲ್ಲಿಯೂ ಪರಿಶುದ್ಧಾತ್ಮನಾದ ಪರಮಾತ್ಮನನ್ನು ಹೇಳದಂತೆ, ಬೈಬಲ್‌ನಲ್ಲಿ ಹೆಚ್ಚಾಗಿ ಎರಡನೆಯ ಆತ್ಮವಾದ ತಂದೆಯನ್ನು ಕುರಿತೇ ಹೇಳುವುದು ನಡೆದಿದೆ.

ಯೇಸು ಬೈಬಲ್ ಗ್ರಂಥದಲ್ಲಿ ಹೇಳಿದ ಎರಡು ಆತ್ಮಗಳ ವಿಷಯವೆಲ್ಲವೂ ಭಗವದ್ಗೀತೆಯಲ್ಲಿ ಮೊದಲೇ ಹೇಳಲಾಗಿದೆ. ಹಿಂದೂಗಳಿಗೆ ಮುಖ್ಯ ಗ್ರಂಥವಾದ ಭಗವದ್ಗೀತೆಯಲ್ಲಿ ಮೊದಲೇ ಹೇಳಿದ ವಿಷಯಗಳು, ಅವೇ ಧರ್ಮಗಳು ಬೈಬಲ್‌ನಲ್ಲಿ ಇರುವಾಗ ಭಗವದ್ಗೀತೆಯನ್ನು ಮೀರಿ ಯಾವುದೂ ಬೈಬಲ್‌ನಲ್ಲಿ ಇಲ್ಲದಿರುವಾಗ ಒಬ್ಬ ಹಿಂದೂ ಕ್ರೈಸ್ತವನಾಗಿ ಬದಲಾಗಬೇಕಾದ ಅವಶ್ಯಕತೆ ಏನು ಬಂದಿದೆ? ಭಗವದ್ಗೀತೆಯಲ್ಲಿ ಇಲ್ಲದ ಜ್ಞಾನ ಬೈಬಲ್‌ನಲ್ಲಿ ಇದ್ದರೆ ಹಿಂದೂವಾದವನು ಕ್ರೈಸ್ತವದೊಳಗೆ ಹೋಗಬಹುದು. ಭಗವದ್ಗೀತೆಯಲ್ಲಿ ಇರುವುವೆಲ್ಲ ಬೈಬಲ್‌ನಲ್ಲಿ ಇರುವಾಗ, ಬೈಬಲ್ ಭಗವದ್ಗೀತೆಯಲ್ಲಿನ ಜ್ಞಾನವೇ ನನ್ನಲ್ಲಿದೆ ಎಂದು ದೃಢೀಕರಿಸಿ ಸಾಕ್ಷಿಯನ್ನು ಕೊಟ್ಟಾಗ, ಹಿಂದೂವಾಗಿರುವವನು ಕ್ರೈಸ್ತವನಾಗಿ ಬದಲಾದರೆ ಭಗವದ್ಗೀತೆಯನ್ನು ಅವಮಾನಿಸಿದಂತಾಗುತ್ತದೆ. ಭಗವದ್ಗೀತೆಯನ್ನು ಅವಮಾನಿಸಿದಾಗ ಅದನ್ನು ಅನುಸರಿಸಿರುವ ಬೈಬಲನ್ನು ಸಹ ಕೀಳಾಗಿ ನೋಡಿದಂತಾಗುತ್ತದೆ. ಅಂತಹದರಲ್ಲಿ ಕ್ರೈಸ್ತವದೊಳಗೆ ಹೋದರೂ

ಅವನಿಗೆ ದೇವರ ಜ್ಞಾನ ಸ್ವಲ್ಪವಾದರೂ ಅಂಟುವುದಿಲ್ಲ. ಅದೇ ವಿಧವಾಗಿ ಯಾವ ಮತದವನಾಗಲಿ, ಅವನ ಮತವನ್ನು ಬಿಟ್ಟು ಪರಮತದೊಳಗೆ ಹೋದರೆ ಅವನ ಮತಗ್ರಂಥವನ್ನು ಮತ್ತೂ ಸೇರಿದ ಮತ ಗ್ರಂಥವನ್ನು ಎರಡನ್ನು ಅವಮಾನಿಸಿದಂತಾಗುತ್ತದೆ. ದೈವ ಗ್ರಂಥಗಳನ್ನೇ ಅಗೌರವಪಡಿಸಿದಾಗ, ಅಂತಹವನಿಗೆ ದೈವಜ್ಞಾನ ಸ್ವಲ್ಪವೂ ಲಭ್ಯವಾಗುವುದಿಲ್ಲ. ಅಷ್ಟೇ ಅಲ್ಲದೆ ಅಲ್ಲಿಯವರೆಗು ಇರುವ ಜ್ಞಾನವು ಸಹ ಇಲ್ಲದಂತೆ ಹೋಗುತ್ತದೆ. ಯಾವ ಮತದಲ್ಲಿರುವವನು ಆ ಮತದಲ್ಲಿಯೇ ಇದ್ದು, ಆ ಮತಕ್ಕೆ ಸಂಬಂಧಿಸಿದ ಗ್ರಂಥದಲ್ಲಿಯೇ ಜ್ಞಾನವನ್ನು ತಿಳಿದುಕೊಳ್ಳುತ್ತಾ ಜ್ಞಾನಾಭಿವೃದ್ಧಿ ಮಾಡಿಕೊಂಡರೆ, ಅಂತಹವನು ಬೇಗನೇ ಜ್ಞಾನಿಯಾಗಿ (ಇಂದೂವಾಗಿ) ಬದಲಾಗುತ್ತಾನೆ. ಹಾಗೆ ಜ್ಞಾನಿಯಾಗಿ ಬದಲಾದವನು ಅನತಿಕಾಲದಲ್ಲಿಯೇ ಯೋಗಿಯಾಗಿ ಬದಲಾಗ ಬಲ್ಲನು. ಯೋಗಿಯಾಗಿ ಬದಲಾದವನು ಮೂರು ದೈವ ಗ್ರಂಥಗಳಲ್ಲಿ ಒಂದೇ ಜ್ಞಾನವನ್ನು ನೋಡುತ್ತಾನೆ. ಕ್ಷರ, ಅಕ್ಷರ, ಪುರುಷೋತ್ತಮರನ್ನು ಮೂರು ಗ್ರಂಥಗಳಲ್ಲಿಯೂ ನಾನು ತೋರಿಸಿದಂತೆ ಉಳಿದ ಜ್ಞಾನವೆಲ್ಲವನ್ನು ಮೂರು ಗ್ರಂಥಗಳಲ್ಲಿ ನೋಡುತ್ತಾನೆ. **ಹಾಗೆ ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವನ್ನು ನೋಡಿದವನು ಅದೇ ಜನ್ಮದಲ್ಲಿಯೇ ಜನ್ಮ ರಾಹಿತ್ಯವನ್ನು ಹೊಂದಿ ದೇವರಲ್ಲಿ ಐಕ್ಯವಾಗುತ್ತಾನೆ.** ಆದ್ದರಿಂದ ಪ್ರತಿ ಒಬ್ಬರೂ ತಾವು ಇರುವ ಮತದಲ್ಲಿಯೇ ಇದ್ದೂ ಜ್ಞಾನಿಯಾಗಿ, ಯೋಗಿಯಾಗಿ ಬದಲಾಗಿ ಮೋಕ್ಷವನ್ನು ಹೊಂದಬೇಕೆಂದು ಆಶಿಸುತ್ತಾ ಮುಗಿಸುತ್ತಿದ್ದೇನೆ.

**ಮುಕ್ತಾಯ**

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೋ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**



**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




## ಇಂದೂ ಜ್ಞಾನವೇದಿಕೆ (I.G.V)

(Regd.No.: 168/2004)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

**(Regd.No.: 159/2015)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org



***www. suvarthakraisthavasangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

**(Regd.No.: 459/2011)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

